# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ಬುದ್ಧಿವಂತರೆಲ್ಲರೂ ಧೈರ್ಯಶಾಲಿಗಳೆಂದು ಹೇಳಲು ಸಾಧ್ಯವಿಲ್ಲ. ಧೈರ್ಯವಿಲ್ಲದ ಬುದ್ಧಿವಂತರು ತಾವು ಕಡಿಮೆಯವರೆಂದೇ ತಿಳಿದುಕೊಳ್ಳುತ್ತಾರೆ. ಇಂತಹ 'ಕೀಳರಿಮೆ' ಒಳ್ಳೆಯದಲ್ಲವೆಂಬುದು ನಿಜವಾದರೂ, ಧೈರ್ಯವು ಮಿತಿಮೀರಿ ಹೋಗುವುದೂ ಒಳ್ಳೆಯದಲ್ಲ. ಅದು ಸರ್ವಾಧಿಕಾರಕ್ಕೆ ಹೋಗಿಬಿಡಬಹುದು. ಮೇಧಾವಿಯಾಗಿ ಮಂತ್ರಿಯಾದವನಿಗೆ ಎಲ್ಲಾ ಬಲ್ಲೆನೆಂಬ ಧೈರ್ಯವು ಮಿತಿಮೀರಿದರೆ ರಾಜನಿಗೇ ಕುತ್ತಾಗಬಹುದೆಂಬ ಎಚ್ಚರಿಕೆ ಈ ಸಂಚಿಕೆಯ "ಎಲ್ಲಾ ಬಲ್ಲವನು" ಎಂಬ ಪುಟ್ಟ ಕಥೆಯಲ್ಲಿ ಅಡಗಿದೆ.

## ಅಮರವಾಣಿ

ನಿಶ್ಶಂಕಂ ದೀಯತೇ ಯೇನ ನ ದಾತಾ ಕ್ಷುನ್ನಿವಾರಿಣೀ
ಸುಧಾ ಸ್ಯಾತ್ ಧೈರ್ಯವಾನ್ ಯಸ್ತು ಸ ಏವ ಪುರುಷೋತ್ತಮಃ

ಸಂಶಯಪಡದೆ ಕೊಡುವವನೇ ದಾತನು, ಹಸಿವೆ ತೀರಿಸುವಂತಹುದೇ ಅಮೃತ; ಧೈರ್ಯವಂತನೇ ಮನುಷ್ಯರೊಳಗೆ ಉತ್ತಮನು.

ಸಂಪುಟ : ೭೪ ಜೂನ್ '೮೫ ಸಂಚಿಕೆ : ೬

ಬಿಡಿ ಪ್ರತಿ ರೂ. ೨-೦೦ : : ವಾರ್ಷಿಕ ಚಂದಾ ರೂ. ೨೪-೦೦





# ಸನ್ಮಾನಾರ್ಹತೆ

ಒಂದು ಊರಿನಲ್ಲಿ ಪ್ರತಾಪನೆಂಬವನಿದ್ದನು. ಅವನಿಗೆ ಯಾವ ವಿದ್ಯೆಗಳಲ್ಲಿಯೂ, ಕಲೆಗಳಲ್ಲಿಯೂ ಪ್ರಾವೀಣ್ಯತೆ ಇಲ್ಲದಿದ್ದರೂ, ಅವನ ಹೆಸರು ದೊಡ್ಡದಾಗಿದ್ದಿತು. ಕಾರಣವೇನೆಂದರೆ ಅವನು ಕಲೆಗಾರರನ್ನು ಕೂಡಿಸಿ ಅವರಿಂದ ಪ್ರದರ್ಶನ ನಡೆಸುವನು, ಆಗ ದೊರೆತ ಹಣದಲ್ಲಿ ಒಂದು ಭಾಗ ತಾನು ತೆಗೆದುಕೊಳ್ಳುವನು. ಈ ವಿಧವಾಗಿ ಅವನಿಗೆ ಚೆನ್ನಾಗಿ ಸಂಪಾದನೆಯಾಗುತಿದ್ದಿತು. ಕಲೆಗಾರರಿಗೆಲ್ಲ ಅವನು ಬೇಕಾದವನೇ ಆದನು.

ಒಂದುಸಾರಿ ಪ್ರತಾಪನು ಒಬ್ಬ ಗಾಯಕನನ್ನು ಕರೆದುಕೊಂಡು ಚಂದನಪುರವೆಂಬ ಊರಿಗೆ ಹೋದನು. ಅಲ್ಲಿ ಆ ಗಾಯಕನಿಂದ ಬಹು ಚೆನ್ನಾಗಿ ಗಾಯನ ಕಚೇರಿ ನಡೆಯಿತು. ಹಣವೂ ಚೆನ್ನಾಗಿ ಬಂದಿತು. ಕಚೇರಿಯ ಕಾರ್ಯಕ್ರಮಗಳೆಲ್ಲ ಮುಗಿದ ಮೇಲೆ ಆ ಊರಿನಲ್ಲಿದ್ದ ಸುಗಂಧನೆಂಬವನಿಂದ ಗಾಯಕನೊಂದಿಗೆ ಬರುವಂತೆ ಪ್ರತಾಪನಿಗೆ ಕರೆ ಬಂದಿತು. ಸುಗಂಧನು ದೊಡ್ಡ ಕಲಾಭಿಮಾನಿಯಾಗಿರಬೇಕೆಂದೂ, ಅದಕ್ಕೇ ಕರೆಕಳುಹಿಸಿದ್ದಾನೆಂದೂ ಪ್ರತಾಪನು ಭಾವಿಸಿದನು.

ಸುಗಂಧನು ಪ್ರತಾಪನನ್ನೂ, ಗಾಯಕನನ್ನೂ ಗೌರವದಿಂದ ಸ್ವಾಗತಿಸಿ, ಇಬ್ಬರಿಗೂ ಒಂದೊಂದು ಬಂಗಾರದ ಪದಕವನ್ನು ಬಹುಮಾನ ಕೊಡುತ್ತ, "ಈ ದಿನ ನಾನು ಅದ್ಭುತವಾದ ಗಾಯನವನ್ನು ಕೇಳಿದೆನು. ಇಂಥವರಿಗೆ ಪ್ರತ್ಯೇಕವಾಗಿ ಸನ್ಮಾನಿಸಿದರೇನೇ ನನಗೆ ತೃಪ್ತಿ. ಅಂತಹ ಗಾಯಕರಿಗೂ, ಅಂಥವರನ್ನು ಹತ್ತು ಮಂದಿಗೆ ಪರಿಚಯಮಾಡಿಸಿದವರಿಗೂ ನನ್ನ ಶಕ್ತ್ಯಾನುಸಾರವಾಗಿ ಮಾಡುವ ಸನ್ಮಾನವಿದು. ಸ್ವೀಕರಿಸಿರಿ" ಎಂದನು.

ಪ್ರತಾಪನು ಆಶ್ಚರ್ಯಪಡುತ್ತ, "ಹಣಕ್ಕಾಗಿಯೇ ನಾವು ಈ ಕೆಲಸ ಮಾಡುತ್ತೇವೆ. ಇದರಲ್ಲಿ ನಮ್ಮನ್ನು ಪ್ರತ್ಯೇಕವಾಗಿ ಸನ್ಮಾನಿಸಬೇಕಾದ ದೊಡ್ಡತನವೇನಿದೆ ? ನೀವು ಇಲ್ಲದ ದೊಡ್ಡತನವನ್ನು ನಮ್ಮ ಮೇಲೆ ಕಲ್ಪಿಸುತ್ತೀರಿ, ಅಷ್ಟೇ" ಎಂದನು.

"ಹಣಕ್ಕಾಗಿ ಪ್ರದರ್ಶಿಸಿದ ಮಾತ್ರಕ್ಕೆ ಕಲೆಯ ಬೆಲೆ ಅಷ್ಟಕ್ಕೇ ಮುಗಿಯುತ್ತದೇನು ? ಕಲಾಕಾರರನ್ನು ನಿಮ್ಮ ಹಾಗೆ ಪ್ರೋತ್ಸಾಹಿಸದೆ ಹೋದರೂ ಹೀಗೆ ಸನ್ಮಾನಿಸುವ ಅವಕಾಶ ಬಂದದ್ದು ನನ್ನ ಅದೃಷ್ಟವೆಂದು ತಿಳಿಯುತ್ತೇನೆ" ಎಂದನು ಸುಗಂಧ.

ಶ್ರೀರಾಮ ಕಮಲ್



ಆ ಮೇಲೆ ಪ್ರತಾಪನು ತಾನು ಯಾವ ಕಲಾಕಾರನನ್ನು ಹೊಂದಿಸಿಕೊಂಡರೂ ತಪ್ಪದೆ ಚಂದನಪುರಕ್ಕೆ ಹೋಗುತ್ತಿದ್ದನು, ಅಲ್ಲಿ ಪ್ರದರ್ಶನ ನಡೆದ ಮೇಲೆ, ಸುಗಂಧನಿಂದ ಪ್ರತ್ಯೇಕ ಬಂಗಾರದ ಪದಕಗಳೂ ದೊರೆಯುತ್ತಿದ್ದುವು. ಹೀಗೆ ಒಬ್ಬ ಶಿಲ್ಪಿ, ಚಿತ್ರಕಾರ, ಕವಿ, ಮಲ್ಲರು ಚಂದನಪುರದಲ್ಲಿ ತಮ್ಮ ತಮ್ಮ ಪ್ರದರ್ಶನ ನಡೆಸಿದರು. ಸುಗಂಧನಿಂದಲೂ ಪ್ರತ್ಯೇಕ ಬಹುಮಾನ ಪಡೆದರು.

ಪ್ರತಾಪನಿಗೆ ಸುಗಂಧನ ವಿಷಯದಲ್ಲಿ ಆಶ್ಚರ್ಯವೂ ಕುತೂಹಲವೂ ಉಂಟಾಗಿತ್ತು. ಅವನು ಎಷ್ಟು ಗ್ರಾಮಗಳಲ್ಲಿ ತಿರುಗಿದರೂ ಸುಗಂಧನ ಹಾಗೆ ಕಲಾಕಾರರನ್ನು ಪ್ರತ್ಯೇಕವಾಗಿ ಸನ್ಮಾನಿಸುವವರು ಇರಲಿಲ್ಲ. ಅಂತಲೇ ಸುಗಂಧನಲ್ಲಿ ಏನೋ ಪ್ರತ್ಯೇಕ ಮಹತ್ವವಿರುವಂತೆ ತೋರತೊಡಗಿತು.

ಸುಗಂಧನನ್ನು ಕುರಿತು ಹತ್ತು ಮಂದಿಯೊಂದಿಗೆ ಹೇಳಬೇಕೆಂದು ಪ್ರತಾಪನಿಗೆ ತೋರಿತು. ಇದಕ್ಕೆ ಗ್ರಾಮಾಧಿಕಾರಿಯಿಂದ ಸಹಾಯ ದೊರೆಯಬಹುದೆಂದುಕೊಂಡು ಪ್ರತಾಪನು ಚಂದನಪುರದ ಗ್ರಾಮಾಧಿಕಾರಿಯ ಬಳಿಗೆ ಹೋದನು.

ಪ್ರತಾಪನು ಸುಗಂಧನ ವಿಷಯದಲ್ಲಿ ತನ್ನ ಉದ್ದೇಶವನ್ನು ತಿಳಿಸಿದಾಗ, ಗ್ರಾಮಾಧಿಕಾರಿ, "ಆ ಸುಗಂಧನನ್ನು ಕುರಿತು ನೀವು ಇಷ್ಟೆಲ್ಲಾ ದೊಡ್ಡ ಆಲೋಚನೆ ಮಾಡಬೇಕಾಗಿಲ್ಲ. ಅವನೊಬ್ಬ ದೊಡ್ಡ ಗರ್ವಿಷ್ಠ. ಆದ್ದರಿಂದಲೇ ನಾವೆಲ್ಲಾ ಅವನನ್ನು ದೂರದಲ್ಲೇ ಇಟ್ಟಿದ್ದೇವೆ. ಅದೇ ಅವನಲ್ಲಿರುವ ಪ್ರತ್ಯೇಕತೆ" ಎಂದನು.

ಪ್ರತಾಪನಿಗೆ ಗ್ರಾಮಾಧಿಕಾರಿಯ ಮಾತಿನಲ್ಲಿ ನಂಬುಗೆಯುಂಟಾಗಲಿಲ್ಲ. ಒಬ್ಬ ಕಲಾವಿದನ ಕಲೆಯನ್ನು ಗುರುತಿಸಿ ಸನ್ಮಾನಿಸಬೇಕೆಂದು ತನಗೆ ತೋರುವಾಗ, ಅವನು ಗರ್ವಿಷ್ಠನು ಹೇಗಾದಾನು ? ಗ್ರಾಮಾಧಿಕಾರಿಗೆ ಸುಗಂಧನ ಮೇಲೆ ಏನೋ ವೈಯಕ್ತಿಕ ಹಗೆ ಇರಬಹುದು. ಊರೊಳಗಿನವರಲ್ಲಿ ಅಂತಹ ಹಗೆ ಸಹಜವೇ.

ಹೀಗೆಂದುಕೊಂಡು ಪ್ರತಾಪನು ಬೇರೆ ಕೆಲವರು ಊರ ಹಿರಿಯರೊಂದಿಗೆ ಮಾತಾಡಿಸಿ ನೋಡಿದನು. ಅವರು ಕೂಡಾ ಗ್ರಾಮಾಧಿಕಾರಿ ಹೇಳಿದ ಮಾತನ್ನೇ ಬಲಪಡಿಸಿ ಹೇಳಿದರು.

ಎಲ್ಲಿಯಾದರೂ ಒಬ್ಬ ದೊಡ್ಡ ಮನುಷ್ಯನಿದ್ದರೆ ಅವನ ಸುತ್ತಮುತ್ತಲಿನವರಿಗೆ ಅವನ ಮೇಲೆ ಅಸೂಯೆಯೇ ಇರುತ್ತದೆ. ಆದುದರಿಂದಲೇ ಗ್ರಾಮದ ಹಿರಿಯರೆಲ್ಲ ಹೀಗೆ ಹೇಳುತ್ತಾರೆಂದು ಭಾವಿಸಿ ಪ್ರತಾಪನು, ಒಂದು ದಿನ ಸ್ವತಃ ಸುಗಂಧನ ಮನೆಗೆ ಹೋದನು. ಸುಗಂಧನು ಅವನನ್ನು ಗೌರವದಿಂದ ಬರಮಾಡಿಕೊಂಡು, ಬಂದ ಕೆಲಸವನ್ನು ಕುರಿತು ಕೇಳಿದನು.

ಪ್ರತಾಪನು ಬಹಳ ವಿನಯದಿಂದ, "ಮತ್ತೇನಿಲ್ಲ, ನಾನೊಂದು ಸಂದೇಹ ನಿವಾರಣೆ ಮಾಡಿಕೊಳ್ಳಲು

ಬಂದಿದ್ದೇನೆ. ನಿಜಕ್ಕೂ ನಿಮ್ಮಂಥವರನ್ನು ನಾನು ಎಲ್ಲಿಯೂ ನೋಡಲಿಲ್ಲ. ಎಲ್ಲಾ ಕಲೆಗಳ ಮೇಲೆಯೂ ನಿಮಗೆ ಅಭಿಮಾನವಿರುವುದು ಸ್ಪಷ್ಟವಾಗಿ ಗೊತ್ತಾಗಿದೆ. ಅಂತಹ ನೀವು ಯಾವ ಕಲೆಯನ್ನೂ ಕಲಿಯುಲಿಲ್ಲವೆಂದೇ ಕಾಣುತ್ತದೆ. ಅದೇಕೆಂಬುದೇ ನನ್ನ ಸಂದೇಹ" ಎಂದನು.

"ನಾನು ಕಲೆಗಳ ಅಭ್ಯಾಸಮಾಡಿಲ್ಲವೆಂದು ನಿಮಗೆ ಯಾರು ಹೇಳಿದರು?" ಎಂದು ಸುಗಂಧನು ಸಹಜ ಶಾಂತತೆಯಿಂದಲೇ ಕೇಳಿದನು.

"ಉತ್ತಮ ಕಲೆಗಾರನು ತನಗೆ ತಿಳಿದ ಕಲೆಗಳನ್ನು ಪ್ರದರ್ಶಿಸದೆ ಮುಚ್ಚಿಟ್ಟುಕೊಳ್ಳುವುದಿಲ್ಲವಷ್ಟೆ? ಆದುದರಿಂದಲೇ ಹಾಗೆ ಹೇಳಿದೆನು" ಎಂದನು ಪ್ರತಾಪ.

"ಕಲೆಗಳನ್ನು ಅರ್ಥಮಾಡಿಕೊಳ್ಳಬಲ್ಲ ರಸಿಕ ಹೃದಯಗಳು ಇದ್ದರೇನೇ ಪ್ರದರ್ಶನಕ್ಕೆ ಸಾರ್ಥಕ. ಅಂಥವರು ಬಹಳ ಅಪೂರ್ವ. ಬನ್ನಿ, ನನ್ನ ಕಲೆಗಳ ಪ್ರಾವೀಣ್ಯತೆಯನ್ನು ನೋಡುವಿರಂತೆ" ಎಂದು ಸುಗಂಧನು ಪ್ರತಾಪನನ್ನು ಒಂದು ಕೋಣೆಯೊಳಗೆ ಕರೆದುಕೊಂಡು ಹೋದನು.

ಅಲ್ಲಿ ಸುಗಂಧನು ಕೆತ್ತಿದ ಅದ್ಭುತವಾದ ಶಿಲ್ಪಗಳೂ, ಬರೆದ ಅಪೂರ್ವವಾದ ಚಿತ್ರಗಳೂ ಇದ್ದವು. ಅವುಗಳನ್ನು ನೋಡಿದ ಪ್ರತಾಪನಿಗೆ ಬಾಯಿ ಬಿದ್ದುಹೋಯಿತು.

ಇಬ್ಬರೂ ಕೋಣೆಯಿಂದ ಹೊರಗೆ ಬಂದ ಮೇಲೆ ಸುಗಂಧನು ಪ್ರತಾಪನೊಂದಿಗೆ "ಈಗ ನನಗೆ ಹಾಡಬೇಕೆಂದು ಉತ್ಸಾಹವಾಗಿದೆ. ಅದನ್ನೂ ಕೇಳಿರಿ" ಎಂದು ಕೊರಳೆತ್ತಿ ರಾಗಾಲಾಪನೆ ಮಾಡಿ ಒಂದು ಹಾಡನ್ನೂ ಹಾಡಿದನು.

ಅವನು ಸುಶ್ರಾವ್ಯವಾದ ಗಾನ ರಸದಲ್ಲಿ ಪ್ರತಾಪನು ತನ್ಮಯನಾಗಿಹೋದನು. ಸ್ವಲ್ಪ ಹೊತ್ತಿಗೆ ಹಾಡು ಮುಗಿಯಿತು. ಆಗ ಅವನನ್ನು ನೋಡಿ ಪ್ರತಾಪನು,



"ಅಯ್ಯಾ, ಈ ದಿನ ಸುದಿನ. ಒಳ್ಳೆಯ ಅದೃಷ್ಟದ ದಿನ. ನಿಮ್ಮ ಗಾಯನವನ್ನು ಕೇಳುವ ಅಮೃತಾವಕಾಶವಾಯಿತು" ಎಂದನು.

ಸುಗಂಧನು ನಕ್ಕು, "ನನಗೆ ಹದಿನಾರು ವಯಸ್ಸು ತುಂಬುವುದಕ್ಕೆ ಮೊದಲೇ ಎಲ್ಲಾ ವಿದ್ಯೆಗಳನ್ನೂ ಕಲಿತೆನು. ನಮ್ಮ ಮನೆಯ ಹಿಂದಿನಿಂದ ವಿಶಾಲವಾದ ತೋಟವಿದೆ. ಆ ತೋಟದೊಳಗಿನ ಪ್ರಕೃತಿಯೇ, ನನ್ನ ಶ್ರೋತೃ, ಪ್ರೇಕ್ಷಕರು ಎಲ್ಲವೂ. ಅಲ್ಲಿಯೇ ನನ್ನ ಕಲಾ ಪ್ರದರ್ಶನ ನಡೆಯುತ್ತಾ ಇರುತ್ತದೆ. ನನಗೆ ಕವಿತ್ವವೂ ಗೊತ್ತಿದೆ. ಯುದ್ಧ ವಿದ್ಯೆಗಳನ್ನೂ ಕಲಿತಿದ್ದೇನೆ. ಒಂದೇ ಮಾತಿನಲ್ಲಿ ಹೇಳುವುದಾದರೆ ಅರುವತ್ತ ನಾಲ್ಕು ಕಲೆಗಳನ್ನೂ ಅಪೋಶನಮಾಡಿದ್ದೇನೆ. ಈಗ ನಿಮಗೆ ತೃಪ್ತಿಯಾಯಿತೆ?" ಎಂದನು.

"ನೀವು ಬಹಳ ದೊಡ್ಡವರು. ನಿಮ್ಮ ದೊಡ್ಡತನವು ಮರೆಯಲ್ಲೇ ಇದ್ದು ಹಾಳಾಗಿ ಹೋಗಬಾರದು. ನಾನು ನಿಮ್ಮನ್ನು ರಾಜಧಾನೀ ನಗರಕ್ಕೆ ಕರೆದು

ಕೊಂಡು ಹೋಗುತ್ತೇನೆ. ಅಲ್ಲಿ ಮಹಾರಾಜರ ಮುಂದೆ ನಿಮ್ಮ ಕಲೆಗಳ ಪ್ರದರ್ಶನಕ್ಕೆ ಏರ್ಪಾಡು ಮಾಡುತ್ತೇನೆ. ಮಹಾರಾಜರೇ ಸ್ವತಃ ನಿಮ್ಮನ್ನು ಸನ್ಮಾನಿಸುತ್ತಾರೆ" ಎಂದನು ಪ್ರತಾಪ.

"ನಾನು ಅಲ್ಪರ ಮುಂದೆ ನನ್ನ ವಿದ್ಯೆಗಳನ್ನು ಪ್ರದರ್ಶಿಸಲಾರೆನು. ನನ್ನನ್ನು ಸನ್ಮಾನಿಸುವ ಅರ್ಹತೆ ಯುಳ್ಳವನು ಇನ್ನೂ ಈ ಪ್ರಪಂಚದಲ್ಲಿ ಹುಟ್ಟಲಿಲ್ಲ. ಅದುವರೆಗೂ ಯಾರ ಸನ್ಮಾನವನ್ನೂ ನಾನು ಅಂಗೀಕರಿಸಲಾರೆನು" ಎಂದನು ಸುಗಂಧ.

ಆ ಮಾತು ಕೇಳಿ ಪ್ರತಾಪನು ಅಪ್ರತಿಭನಾಗಿ, "ನೀವು ಕಲೆಗಾರರನ್ನು ಸನ್ಮಾನಿಸಿದಾಗ ಯಾರಾದರೂ ನಿಮ್ಮ ಅರ್ಹತೆಯನ್ನು ಕೇಳಿದ್ದಾರೆಯೇ? ನಿಮ್ಮನ್ನು ಸನ್ಮಾನಿಸಬೇಕಾದರೆ ಮಾತ್ರ ಅರ್ಹತೆಯನ್ನು ಕುರಿತು ಹೇಳುವುದು ಅನ್ಯಾಯವಾಗದೆ?" ಎಂದನು.

ಸುಗಂಧನು ದರ್ಪದ ನಗೆಯೊಂದನ್ನು ಹಾರಿಸಿ, "ಯಾರನ್ನಾದರೂ ಸನ್ಮಾನಿಸಬೇಕಾದ ಅರ್ಹತೆಗಳು ನನಗಿದೆ. ನನ್ನನ್ನು ಸನ್ಮಾನಿಸುವ ಅರ್ಹತೆ ಮಾತ್ರ ಯಾರಿಗೂ ಇಲ್ಲ" ಎಂದು ಸ್ವಲ್ಪ ತಡೆದು, "ಇಲ್ಲಿಗೆ ಪಕ್ಕದ ಗ್ರಾಮದಲ್ಲಿ ಜಮೀನ್ದಾರರ ಮನೆಗೆ ವಾಮನ ಮೂರ್ತಿ ಎಂಬ ವೀಣಾ ವಿದ್ವಾಂಸನು ಬಂದಿದ್ದಾನೆ. ಆತನನ್ನು ಇಲ್ಲಿಗೆ ಕರೆದು ಸನ್ಮಾನ ಮಾಡಬೇಕೆಂದಿ ದ್ದೇನೆ. ಇಷ್ಟವಿದ್ದರೆ ನನ್ನೊಂದಿಗೆ ಬನ್ನಿರಿ" ಎಂದನು.

ಸುಗಂಧನೊಂದಿಗೆ ಪ್ರತಾಪನು ಆ ವೀಣಾ ವಿದ್ವಾಂಸನ ಬಳಿಗೆ ಹೋದನು. ಆ ವಿದ್ವಾಂಸನು ಸುಗಂಧನ ಕೋರಿಕೆಯನ್ನು ಕೇಳಿ, ಅವನ ಮುಖ ವನ್ನು ಸ್ವಲ್ಪ ಹೊತ್ತು ಪರೀಕ್ಷಿಸಿ ನೋಡಿ, "ನನಗೆ ನೀವು ಸನ್ಮಾನ ಮಾಡುವಿರಾ? ಆಶ್ಚರ್ಯ! ಗಾನ ಕಲೆಯಲ್ಲಿ, ಅದರಲ್ಲಿಯೂ ವೀಣಾವಾದನವನ್ನು ಕುರಿತು ನಿಮಗೇನು ಗೊತ್ತಿದೆ? ನಿಮಗಿರುವ ಅರ್ಹತೆಗಳು ಯಾವುವು?" ಎಂದು ಕೇಳಿದನು.

ಸುಗಂಧನು ಕೆಲವು ಕ್ಷಣ ಬೆರಗಾಗಿ, ಉತ್ತರವೇನೂ ಕೊಡದೆ ತಲೆ ತಗ್ಗಿಸಿಕೊಂಡು ಅಲ್ಲಿಂದ ಹೊರಟನು. ಪ್ರತಾಪನೂ ಅವನನ್ನು ಅನುಸರಿಸಿ ನಡೆದನು.

ದಾರಿಯಲ್ಲಿ ಪ್ರತಾಪನು ಸುಗಂಧನೊಂದಿಗೆ, "ನಿಮ್ಮಂಥವರೇ ಆದ ಇನ್ನೊಂದು ವ್ಯಕ್ತಿಯನ್ನು ಈ ದಿನ ನೋಡುವಂತಾದದ್ದು ನನ್ನ ಅದೃಷ್ಟವೆನ್ನ ಬೇಕೋ ದುರದೃಷ್ಟವೆನ್ನಬೇಕೋ ತಿಳಿಯುವುದಿಲ್ಲ. ಆದರೆ ಒಂದು ಸಂಗತಿ. ನಿಮ್ಮಲ್ಲಿ ಎಷ್ಟೇ ಪ್ರತಿಭೆ ಇದ್ದರೂ ನಿಮ್ಮ ಗರ್ವದ ಕಾರಣದಿಂದಾಗಿ ನಿಮಗೆ ಸನ್ಮಾನದ ಅರ್ಹತೆ ಇಲ್ಲ. ಅರ್ಹತೆ ಇಲ್ಲದ ನಿಮ್ಮನ್ನು ಸನ್ಮಾನಿಸಬೇಕೆಂದುಕೊಂಡದ್ದು ನನ್ನ ತಿಳಿಗೇಡಿತನವೇ ನಿಜ" ಎಂದನು.

ಆಮೇಲೆ ಪ್ರತಾಪನು ಎಂದಿಗೂ ಸುಗಂಧನ ಮನೆಗೆ ಹೋಗಲೇ ಇಲ್ಲ.








[ಚಂದ್ರವರ್ಮನು ನದಿಯಲ್ಲಿ ಹೊಡೆದುಕೊಳ್ಳುತ್ತಾ ಹೋಗಿ ಒಂದಾನೊಂದು ಕಾಡಿನಲ್ಲಿ ತೀರಕ್ಕೆ ತಳ್ಳಲ್ಪಟ್ಟನು. ಮೆಲ್ಲನೆದ್ದು ಕಾಡಿನಲ್ಲಿ ನಡೆಯುತ್ತಿರಲು, ನರಳುವ ಶಬ್ದವೂ, ಕೂಗುಗಳೂ ಕೇಳಿಸಿದವು. ಅದನ್ನು ಅನುಸರಿಸಿ ಹೋಗಿ ಚಂದ್ರವರ್ಮನು ಕಾಪಾಲಿನಿಯೊಬ್ಬಳ ಗುಹೆಯಲ್ಲಿ ಮಂತ್ರವಾದಿನಿಯ ಗಾಜಿನ ಗೋಳದಲ್ಲಿ ವೀರಪುರದ ಸೇನಾಪತಿ ಧೀರಮಲ್ಲನು ಶತ್ರುಗಳ ಮಧ್ಯೆ ಸಿಕ್ಕಿಬಿದ್ದುದನ್ನು ನೋಡಿದನು. — ಇನ್ನು ಓದಿರಿ]

**ನೋ**ಡುತ್ತಾ ಸ್ತಂಭಿಸಿ ನಿಂತ ಚಂದ್ರವರ್ಮನ ಭುಜದ ಮೇಲೆ ಕಾಪಾಲಿನಿ ಕೈಯನ್ನಿಟ್ಟು, "ಅಪ್ಪಾ ಚಂದ್ರವರ್ಮಾ, ನಡೆದ ಘೋರ ಘಟನೆಗಳನ್ನು ನೋಡಿ ಅಧೈರ್ಯಪಡಬೇಡ. ಕ್ಷತ್ರಿಯನು ಜೀವವಿರುವವರೆಗೂ ಧೈರ್ಯ ಬಿಡಲಾರನು" ಎಂದು ಸಮಾಧಾನದ ಮಾತು ಹೇಳಿ, "ಯಾರಿಗೂ ಕಷ್ಟಗಳು ಬಹಳ ಕಾಲದವರೆಗೆ ಬರುವುದಿಲ್ಲ. ಸುಖವೂ ಅಷ್ಟೇ, ಯಾವಾಗಲೂ ಸುಖವೇ ಬಂದುಕೊಂಡಿರುವುದಿಲ್ಲ. ನೀನು ಯಾವುದೋ ಒಂದು ದಿನ ನಿನ್ನ ರಾಜ್ಯವನ್ನು ಪಡೆದುಕೊಳ್ಳುವಿ, ಅಂತೂ ಕಡೆಯಲ್ಲಿ ಜಯವು ನಿನಗೇ ಎಂದು ತಿಳಿ. ನನಗೆ ವಾಗ್ದಾನ ಮಾಡಿದ ಹಾಗೆ ಈಗ ಸಹಾಯ ಮಾಡಿದಿಯಾದರೆ, ಆಮೇಲೆ ನಿನಗೆ ಎಂತಹ ಸಹಾಯವನ್ನಾದರೂ ನಾನು ಮಾಡುತ್ತೇನೆ" ಎಂದಳು.

ಕಾಪಾಲಿನಿ ಹೇಳಿದ ಮಾತುಗಳಿಂದ ಚಂದ್ರವರ್ಮನಿಗೆ ಸ್ವಲ್ಪವೂ ಉತ್ಸಾಹ ಬರಲಿಲ್ಲ. ನೂರು ಯೋಜನಗಳಷ್ಟು ದೂರವಿರುವ ಶಂಖನೆಂಬ ಮಾಂತ್ರಿಕನ ಮಂತ್ರಗೃಹದೊಳಗೆ ಪ್ರವೇಶಿಸಿ, ಕಾಪಾಲಿನಿ ಹೇಳುವ ಒಂದಾನೊಂದು ಮಹತ್ವದ ವಸ್ತುವನ್ನು ಎತ್ತಿಕೊಂಡು ಬರಬೇಕು. ಈ ನಿರ್ಬಂಧ



ಕಾಲನಾಗವಾಗಲಿ, ಅಡವಿಯ ಮರಮಟ್ಟುಗಳಾಗಲಿ ನಿನಗೆ ಯಾವ ತೊಂದರೆಯನ್ನೂ ಮಾಡದಂತೆ ನೋಡಿಕೊಳ್ಳುತ್ತೇನೆ. ಒಂದು ನಂಬುಗೆಯಿಂದ ನಿನ್ನನ್ನು ಬರಮಾಡಿಕೊಂಡೆನು. ಸಾಧ್ಯವಿಲ್ಲವೆಂದರೆ ಬಿಟ್ಟುಬಿಡುತ್ತೇನೆ. ನಿನ್ನ ಮೇಲೆ ನನಗೆ ಕೋಪ ವೇನಿಲ್ಲಪ್ಪಾ. ವ್ಯರ್ಥವಾಗಿ ನನ್ನ ಮೇಲೆ ಇಲ್ಲದ ಅಪೋಹ ಕಲ್ಪಿಸಿಕೊಳ್ಳಬೇಡ" ಎಂದಳು.

ಬೇಕಾದರೆ ಕಾಪಾಲಿನಿ ತನ್ನನ್ನು ಹೋಗಲಿಕ್ಕೆ ಬಿಡುತ್ತಾಳೆಂಬುದನ್ನು ಕೇಳಿ ಚಂದ್ರವರ್ಮನಿಗೆ ಸಂತೋಷವಾಗುವುದಕ್ಕೆ ಬದಲು ದಿಗಿಲೇ ಹಿಡಿಯಿತು. ತಾನು ಇಲ್ಲಿಂದ ಹೋಗಬಹುದೆಂದಾದರೆ ಎಲ್ಲಿಗೆ ಹೋಗಬೇಕು? ಹೋಗಲು ಗಮ್ಯಸ್ಥಾನವೊಂದು ಅವನಿಗೆ ಎಲ್ಲಿಯೂ ಕಾಣಲಿಲ್ಲ. ಈ ಪರಿಸ್ಥಿತಿಯಲ್ಲಿ ತಾನು ದಿಕ್ಕು ತಿಳಿಯದ ಕಾಡಿನೊಳಗೆ, ಗುಡ್ಡ ಬೆಟ್ಟಗಳ ನಡುವೆ ಏಕಾಂಗಿಯಾಗಿ ತಿರುಗುವುದರ ಹೊರತು ಮತ್ತೇನು ಮಾಡಲು ಸಾಧ್ಯವಿದೆ? ಇಷ್ಟರೊಳಗೆ ತನ್ನ ತಂದೆಯೂ ತೀರಿಹೋಗಿದ್ದಾರು. ಅವರನ್ನು ಹತಮಾಡಿದ ಧೈರ್ಯದಿಂದಲೇ ಸರ್ಪಕೇತು ಇಷ್ಟೆಲ್ಲಾ ಮಾಡಿದ್ದಾನೆ. ರಾಜ್ಯವು ಶತ್ರುವಿನ ಕೈವಶವಾಯಿತು. ವಿಶ್ವಾಸಪಾತ್ರನಾದ ಸುಬಾಹುವೂ ಕಾಣದೆ ಹೋಗಿದ್ದಾನೆ! ಈ ಸಂದರ್ಭದಲ್ಲಿ ಕ್ಷತ್ರಿಯನಾದ ತಾನು ಕಾಪಾಲಿನಿಗೆ ಕೊಟ್ಟ ಮಾತನ್ನು ಅಲ್ಲಗಳೆಯಲೇ? ತಾನು ಬದುಕಿರುವವರೆಗೆ ಅಂತಹ ಕಳಂಕಕ್ಕೆ ಎಡೆ ಕೊಡಬಾರದು.

"ಅಮ್ಮಾ ಕಾಪಾಲಿನೀ! ನಾನು ನನ್ನ ಸರ್ವಶಕ್ತಿಗಳನ್ನೂ ನಿನಗೆ ಸಹಾಯಮಾಡಲಿಕ್ಕೆ ಉಪಯೋಗಿಸುವುದೆಂದೇ ನಿಶ್ಚಯಿಸಿದ್ದೇನೆ. ಆ ಶಂಬನೆಂಬ ಮಾಂತ್ರಿಕನ ಮಂತ್ರಗೃಹದಿಂದ ನಾನು ತರಬೇಕಾದ ವಸ್ತು ಯಾವುದೆಂದು ವಿವರಿಸಿ ಹೇಳಿಬಿಡು. ಇನ್ನು ನನ್ನನ್ನು ಶಂಕಿಸಬೇಡ. ಕ್ಷತ್ರಿಯ ಕುಮಾರನಾದ ನಾನು ಹೇಳಿದ ಮಾತು ತಪ್ಪಲಾರೆನು.

ದಲ್ಲಿ ತಾನೀಗ ಸಿಕ್ಕಿಕೊಂಡ ಹಾಗಾಗಿದೆ. ಆ ದುಸ್ತರವಾದ ಪ್ರಯತ್ನದಲ್ಲಿ ತಾನು ಸಾಯದೆ ಬದುಕಿ ಬಂದರೆ, ಆಮೇಲೆ ಕಾಪಾಲಿನಿ ತನಗೆ ಬೇಕಾದ ಸಹಾಯ ಮಾಡುತ್ತಾಳೆ, ಹಾಗೆ ಇವಳ ಸಹಾಯ ಪಡೆಯಲು ತಾನು ಬದುಕಿರಲಾರದೆ, ಸತ್ತುಗಿತ್ತು ಹೋದರೆ? ಈ ಸಂದೇಹದ ದೂರದ ಆಶಾತಂತುವನ್ನು ನಂಬುವುದು ಹೇಗೆ?

ಚಂದ್ರವರ್ಮನ ತಲೆಯೊಳಗೆ ತಿರುಗುವ ಆಲೋಚನೆ ಏನೆಂಬುದನ್ನು ತಿಳಿದವಳ ಹಾಗೆ, ಕಾಪಾಲಿನಿ ಒಂದು ದೀರ್ಘಶ್ವಾಸವನ್ನು ಬಿಟ್ಟು, ಕಿರುನಗೆಯನ್ನು ತೋರಿಸಿಕೊಂಡು, "ಅಪ್ಪಾ, ಚಂದ್ರವರ್ಮಾ, ನೀನು ಆಲೋಚನೆ ಮಾಡುವ ವಿಷಯವೇನೆಂಬುದನ್ನು ನಾನು ಊಹಿಸಿಕೊಂಡಿದ್ದೇನೆ ಗೊತ್ತಾ? ನೀನು ಈ ಕ್ಷಣದಲ್ಲಿ ಇಲ್ಲಿಂದ ಹೊರಟುಹೋಗುವಿಯಾದರೆ ಹೇಳಿಬಿಡು. ನೀನು ನಿನ್ನ ಪಾಡಿಗೆ ಹೊರಟುಹೋಗಲು ನಾನು ಅಡ್ಡಿ ಮಾಡುವುದಿಲ್ಲ.



"ಇದರಲ್ಲಿ ಪ್ರಾಣ ಹೋದರೂ ಸರಿಯೇ, ಹೇಳಮ್ಮ" ಎಂದು ಉತ್ಸಾಹದಿಂದ ಹೇಳಿದನು ಚಂದ್ರವರ್ಮ.

ಕಾಪಾಲಿನಿಯ ಮುಖವು ವಿಕಸಿತವಾಯಿತು. ಅವಳು ಮೆತ್ತೆಯ ಮೇಲಿನಿಂದ ಎದ್ದು, ತನ್ನ ಕೈಯಲ್ಲಿದ್ದ ಮಾನವಾಸ್ಥಿಕೆಯಿಂದ, ಗೋಡೆಯ ಬದಿಯಲ್ಲಿದ್ದ ಮರದ ಬೊಂಬೆಯ ತಲೆಯ ಮೇಲೆ ಗಟ್ಟಿಯಾಗಿ ಹೊಡೆದು, "ಹೇ, ಭೈರವಾ! ಅತಿಥಿ ಬಂದಿದ್ದಾನೆ. ತುಂಬಾ ಹಸಿವೆಯಿಂದಿದ್ದಾನೆ. ಷಡ್ರಸೋಪೇತವಾದ ಒಳ್ಳೆಯ ಔತಣ ಬಡಿಸಿ ತಾರೋ!" ಎಂದಳು.

ಕೂಡಲೇ ಸುತ್ತಲೂ ದದ್ದರಿಸುವ ಹಾಗೆ, ಹೂಂಕಾರವೆದ್ದಿತು. ಮರುಕ್ಷಣದಲ್ಲಿ ಮಹಾಕಾಯನೊಬ್ಬನು ಪ್ರತ್ಯಕ್ಷನಾಗಿ, "ಇಗೋ ತಂದಿದ್ದೇನೆ. ಉತ್ತಮೋತ್ತಮವಾದ ಔತಣ!" ಎಂದು ಅನೇಕ ಬಗೆಯ ತಿಂಡಿ ಪದಾರ್ಥಗಳನ್ನು ಬಡಿಸಲ್ಪಟ್ಟ, ಬಂಗಾರದ ತಾಂಬಾಣಗಳನ್ನು ತಂದು ಚಂದ್ರವರ್ಮನ ಮುಂದೆ ಇಟ್ಟನು. ಉತ್ತಮವಾದ ಪಾನೀಯಗಳನ್ನೂ ತಂದು ಓರಣವಾಗಿಟ್ಟನು.

ಅದನ್ನು ನೋಡಿದೊಡನೆ ಮೂಗಿಗೂ ಸುವಾಸನೆ ಹೊಡೆಯಲು, ಚಂದ್ರವರ್ಮನಲ್ಲಿ ಅಡಗಿಕೊಂಡಿದ್ದ ಹಸಿವೆ ಒಮ್ಮೆಗೇ ಎದ್ದು ದೊಡ್ಡದಾಗಿ ಬಾಯಿ ತೆರೆಯಿತು. ಅವನ ಕೈ ಕೂಡಲೇ ಕೆಲಸಕ್ಕೆ ತೊಡಗಿತು. ಅವನು ಊಟ ಮುಗಿಸುವವರೆಗೂ ಒಂದು ಬದಿಯಲ್ಲಿ ಭೈರವನೂ, ಮತ್ತೊಂದು ಬದಿಯಲ್ಲಿ ಕಾಪಾಲಿನಿಯೂ ತೃಪ್ತಿಯಿಂದ ನೋಡುತ್ತಾ ನಿಂತರು. ಚಂದ್ರವರ್ಮನು ತಿನ್ನಲು ಸಾಧ್ಯವಾದಷ್ಟು ತಿಂದು, ತೇಗುತ್ತ ಉಳಿದ ಪದಾರ್ಥಗಳೊಂದಿಗೆ ಬಂಗಾರದ ತಾಂಬಾಣಗಳನ್ನು ದೂರಕ್ಕೆ ತಳ್ಳಿದನು, ಪಾನೀಯವನ್ನು ಕುಡಿದು ತೃಪ್ತನಾದನು. ಆಮೇಲೆ, ಭೈರವನು ಕೈ ತೊಳೆಯಲು ನೀರು, ಕೈ ಒರೆಸಲು ಬಟ್ಟೆಯನ್ನೂ ತಂದಿಟ್ಟನು.

ಕಾಲನಾಗ, ಭೈರವರಂತಹ ದೊಡ್ಡ ದೊಡ್ಡ ಶಕ್ತಿಗಳನ್ನು ಕೈಯೊಳಗಿಟ್ಟುಕೊಂಡಿದ್ದ ಕಾಪಾಲಿನಿ, ಶಂಖ ಮಾಂತ್ರಿಕನಿಂದ ತನಗೆ ಬೇಕಾದ ವಸ್ತುಗಳನ್ನು ಏಕೆ ತರಿಸಿಕೊಳ್ಳಲಾಗುವುದಿಲ್ಲ? ಅದಕ್ಕೆ ತನ್ನಂತಹ ಪರಿಮಿತ ಶಕ್ತಿಯವನೇ ಏಕೆ ಆಗಬೇಕು? ಇದರಲ್ಲಿ ಏನಾದರೂ ಮೋಸವಿರಬಹುದೇ? ತನ್ನಂತಹ ಕ್ಷತ್ರಿಯನನ್ನು ಬಲಿ ಕೊಡುವ ಉಪಾಯವೇ? ಕೆಲವು ದುಷ್ಟ ಶಕ್ತಿಗಳು ಅಂತಹ ಬಲಿಯನ್ನು ಬಯಸುತ್ತವೆಂದು ಚಂದ್ರವರ್ಮನು ಕೇಳಿದ್ದನು. ಅಂತಲೇ ಚಂದ್ರವರ್ಮನಿಗೆ ಮತ್ತೆ ಸಂದೇಹವೆದ್ದಿತು.

"ಅಪ್ಪಾ, ಚಂದ್ರವರ್ಮಾ, ಈಗ ಮುಖ್ಯ ವಿಷಯವನ್ನು ಕುರಿತು ಮಾತಾಡೋಣ. ಶಂಖನ ಮಂತ್ರಗೃಹದೊಳಗೆ ಅಪೂರ್ವ ಶಕ್ತಿಗಳಿರುವ ಒಂದು ಶಂಖವಿದೆ. ಒಂದಾನೊಂದು ಅಪೂರ್ವ ಮೂಲಿಕೆಯಿಂದ ಕಾಯಿಸಿದ ಕಷಾಯವನ್ನು ಅದರಲ್ಲಿ ಸುರಿದು ಕುಡಿದವರಿಗೆ, ವೃದ್ಧಾಪ್ಯವು ನಶಿಸಿ, ಮತ್ತೆ

ಯೌವನವು ಬರುತ್ತದೆ. ಮುಂದೆ ಸಾವಿರ ವರ್ಷಗಳ ವರೆಗೆ ವೃದ್ಧಾಪ್ಯವು ಅವರ ಕಡೆಗೆ ಸುಳಿಯಲಾರದು. ಈಗ್ಗೆ ಸಾವಿರದ ಎಂಬತ್ತು ವರ್ಷಗಳ ಹಿಂದೆ ಆ ಚಿಕಿತ್ಸೆ ಪಡೆದವಳು ನಾನು. ಆಗ ಮಾಂತ್ರಿಕನಾದ ಶಂಖನು ನನಗೆ ವಿರೋಧಿಯಾಗಿರಲಿಲ್ಲ. ಆಮೇಲೆ ಅವನಿಗೂ ನನಗೂ ಬದ್ಧ ವಿರೋಧ ಉಂಟಾಯಿತು " ಎಂದು ಹೇಳಿ ಕಾಪಾಲಿನಿ ಥಕ್ಕನೆ ಹಿಂದಕ್ಕೆ ತಿರುಗಿ, ದೂರದಲ್ಲಿ ನಿಂತಿದ್ದ ಭೈರವನನ್ನು ಕಿಡಿಗಣ್ಣಿನಿಂದ ನೋಡಿ. " ಥೀ ನೀಚನೇ ! ನಿನ್ನ ಹಾಳು ಬುದ್ಧಿ ಇನ್ನೂ ಬಿಟ್ಟಿಲ್ಲವೇ ? ಹೊಂಚಿ ಕೇಳುವೆಯಾ ? " ಎಂದು ಮಾನವಾಸ್ಥಿಕೆಯಿಂದ ಅವನ ತಲೆಯ ಮೇಲೆ ಹೊಡೆದಳು. ಅವನು ದೊಡ್ಡ ದನಿಯಿಂದ ನರಳಿ ಗೋಡೆಯ ಬದಿಗೆ ಒರಗಿ ಬಿದ್ದು ಮರದ ಬೊಂಬೆಯ ಹಾಗಾದನು.

" ಅವನು ನಿನ್ನ ಸೇವಕ ತಾನೇ ? ಅಷ್ಟೊಂದು ವಿಧೇಯನಾಗಿರುವ ಮಹಾ ಬಲಿಷ್ಠನನ್ನು ಹಾಗೇಕೆ ಕಠಿಣವಾಗಿ ಹೊಡೆಯುವೆಯಮ್ಮಾ ? " ಎಂದು ಕೇಳಿದನು ಚಂದ್ರವರ್ಮ.

ಕಾಪಾಲಿನಿ ವಿಕಟವಾಗಿ ನಕ್ಕು, " ಅವನು ನನ್ನ ಸೇವಕನಾದರೂ ಸಮಯ ಸಿಕ್ಕಿದರೆ ನನ್ನ ರಹಸ್ಯಗಳನ್ನು ತಿಳಿದುಕೊಂಡು ನನ್ನನ್ನು ಕಡೆಮುಟ್ಟಿಸಿ, ಶಂಖನ ಬಳಿಗೆ ಓಡಿಹೋಗುವ ಎತ್ತುಗಡೆಯಲ್ಲಿರುವ ನೀಚ. ಈ ಬಗೆಯ ತುಚ್ಛ ಭೂತಗಳೊಂದಿಗೆ ಬರುವ ತಂಟೆ ಇದೇ, ಅವರು ಸೇವೆ ಮಾಡುವ ಮಾಂತ್ರಿಕರಿಗಿಂತ ಹೆಚ್ಚು ಬಲಿಷ್ಠರು ಯಾರಾದರೂ ಇದ್ದರೆ, ಅವರ ಆಶ್ರಯಕ್ಕೆ ಸೇರಲು ಪ್ರಯತ್ನಿಸುತ್ತಾ ಇರುತ್ತಾರೆ. ಅದಕ್ಕೇ ಅವನನ್ನು ಮರದ ತುಂಡಿನ ಹಾಗೆ ಮಾಡಿ, ಕುಳ್ಳಿರಿಸಿಟ್ಟಿದ್ದೇನೆ. ಶಂಖನು ನನ್ನ ರಹಸ್ಯಗಳನ್ನು ಕಂಡುಹಿಡಿಯಲು ಅನೇಕರನ್ನು ಕಳುಹಿಸಿದ್ದಾನೆ. ಅವರಿಗೆ ಬಂದ ದುಸ್ಥಿತಿ ನೋಡಿದೆಯಷ್ಟೆ ? " ಎಂದು ಕಾಪಾಲಿನಿ ದ್ವಾರದಲ್ಲಿ ತೋರಣಗಳಾಗಿ ನೇತಾಡುವ ಕಪಾಲಗಳನ್ನು ಚಂದ್ರವರ್ಮನಿಗೆ ತೋರಿಸಿದಳು. ಈ ಕಾಪಾಲಿನಿಗೆ ಶಂಖಮಾಂತ್ರಿಕನು ಎಷ್ಟು ದೊಡ್ಡ ಶತ್ರುವೋ ಈಗ ಚಂದ್ರವರ್ಮನಿಗೆ ಅರ್ಥವಾಯಿತು.



ಆ ಕಪಾಲಮಾಲೆಯ ತೋರಣವನ್ನು ನೋಡಿ ಚಂದ್ರವರ್ಮನ ಸರ್ವಾಂಗವೂ ಕಂಪಿಸಿ ರೋಮಾಂಚನವಾಯಿತು. ಆ ಕ್ಷಣದವರೆಗೂ ಅವನು ಅವುಗಳ ಕಡೆಗೆ ಪರೀಕ್ಷಿಸಿ ನೋಡಿರಲಿಲ್ಲ. ಯಾರೋ ಸಾಧಾರಣದ ಮಾನವರ ಕಪಾಲಗಳೆಂದುಕೊಂಡಿದ್ದನು. ಅವೆಲ್ಲ ದೊಡ್ಡ ಭೂತಶಕ್ತಿಗಳ ಕಪಾಲಗಳೆಂದು ತಿಳಿದು, ಕಾಪಾಲಿನಿಯ ಶಕ್ತಿಗೆ ಆಶ್ಚರ್ಯಪಟ್ಟನು. ಶಂಖನು ಕಳುಹಿಸಿದವರ ಗತಿ ಹೀಗಾದ ಹಾಗೆಯೇ, ಕಾಪಾಲಿನಿ ಕಳುಹಿಸಿದ ದೂತರ ಕಪಾಲಗಳು ಶಂಖನ ಕುತ್ತಿಗೆಯ ಮಾಲೆಗಳಾದವೋ ಏನೋ ! ತಾನೀಗ ಅಂತಹ ದೂತನಾಗಿ ಶಂಖನ ಬಳಿಗೆ ಹೋಗಲಿರುವೆನೆಂದು ನೆನೆದಾಗ ಅವನ ಮೈ ಜುಮುಗುಟ್ಟಿತು.




"ಓ ಕಾಪಾಲಿನೀ ತಾಯೇ! ನೀನು ನನ್ನ ಹಾಗೆಯೇ ಈ ಮೊದಲು ಬೇರೆ ದೂತರನ್ನು ಕಳುಹಿಸಿರಬಹುದಷ್ಟೆ? ಅವರು ಕೂಡಾ ಶಂಖನ ಕೈಯಲ್ಲಿ ಹೀಗೆಯೇ ಹತವಾದರೋ?" ಎಂದು ಬಾಯಿಬಿಟ್ಟೇ ಕೇಳಿದನು ಚಂದ್ರವರ್ಮ.

ಕಾಪಾಲಿನಿ ಹಾಗೇನಿಲ್ಲವೆಂದು ತಲೆಯಾಡಿಸುತ್ತ, "ನಾನು ಇಷ್ಟರವರೆಗೂ ಅವನ ಬಳಿಗೆ ಯಾರನ್ನೂ ಕಳಹಿಸಲಿಲ್ಲ. ಆ ಅಪೂರ್ವ ಶಕ್ತಿಯ ಶಂಖವನ್ನು ತಸ್ಕರಿಸಿ ತರಬಲ್ಲವರು ಯಾರೆಂದು ನನಗೆ ಗೊತ್ತಿದೆ. ಅವನ ನಿರೀಕ್ಷಣೆಯಲ್ಲಿಯೇ ಇದ್ದೆನಲ್ಲದೆ, ವ್ಯರ್ಥವಾಗಿ ಯಾರು ಯಾರನ್ನೋ ಏಕೆ ಕಳುಹಿಸಲಿ? ಅದರ ಲಕ್ಷಣಗಳು ನಿನ್ನಲ್ಲಿ ಮಾತ್ರವೇ ಇವೆ" ಎಂದಳು.

"ಅಂತಹ ಸಮರ್ಥನು ನಾನೆಂದು ನಿನ್ನ ಅಭಿಪ್ರಾಯ, ನಿಜತಾನೆ?" ಎಂದನು ಚಂದ್ರವರ್ಮ.

"ಹೌದಪ್ಪ ಚಂದ್ರವರ್ಮಾ" ಎಂದು ಕಾಪಾಲಿನಿ ಉತ್ಸಾಹದಿಂದ, "ನೀನು ಪ್ರಾಯದಲ್ಲಿ ಯುವಕ, ಅದರ ಮೇಲೆ ಕ್ಷತ್ರಿಯ ಕುಮಾರ. ಅದೂ ಅಲ್ಲದೆ ಬಂಧುಮಿತ್ರರನ್ನೂ, ಸರ್ವಸ್ವವನ್ನೂ ಕಳೆದುಕೊಂಡವನು. ಇಂತಹ ಮಹಾ ಸಾಹಸಿಕನು ಬೇರೆ ಯಾರಿದ್ದಾನೆ? ಈ ಪ್ರಯತ್ನದಲ್ಲಿ ನೀನು ಗೆದ್ದುಬಿಟ್ಟರೆ, ಆಮೇಲೆ ನೀನು ರಾಜನಷ್ಟೇ ಅಲ್ಲ, ಮೊತ್ತ ದೇಶಕ್ಕೆಲ್ಲಾ ಚಕ್ರವರ್ತಿಯಾಗುವಿ. ಅದಕ್ಕೆ ಏನು ದಾರಿ ಎಂಬುದನ್ನು, ಈಗ ಹೇಳಿ ಪ್ರಯೋಜನವಿಲ್ಲ. ಆ ಅಪೂರ್ವ ಶಂಖವನ್ನು ತಂದುಕೊಟ್ಟ ಮೇಲೆ ಹೇಳುತ್ತೇನೆ" ಎಂದಳು.

ಕಾಪಾಲಿನಿ ಹೇಳಿದುದನ್ನು ಕೇಳಿ ಚಂದ್ರವರ್ಮನಿಗೆ ಬಹಳ ಉತ್ಸಾಹವಾಯಿತು. ಆದರೂ ಅವನ ಹೃದಯದೊಳಗೆ ಎಲ್ಲಿಯೋ ಅನುಮಾನದ ಎಳೆಯೊಂದು ಕದಲಿಕೊಂಡೇ ಇದ್ದಿತು. ತನ್ನಿಂದ ಮಹತ್ವವಾದ ಆ ಶಂಖವನ್ನು ತರಿಸಿಕೊಳ್ಳಲು ಈ ಕಾಪಾಲಿನಿ ತನಗೆ ಹೀಗೆಲ್ಲಾ ಆಶೆ ತೋರಿಸಿ ಉಬ್ಬಿಸುವಳೋ?

"ಸರಿಯಮ್ಮ. ಆ ಮಾಂತ್ರಿಕನಿರುವಲ್ಲಿಗೆ ಹೋಗುವ ದಾರಿಯ ಗುರುತುಗಳನ್ನು ಹೇಳು. ಇನ್ನು ಹೊರಡುತ್ತೇನೆ" ಎಂದನು ಚಂದ್ರವರ್ಮ. ಏನಾದರೂ ಹೇಳಿದ ಮಾತು ತಪ್ಪಬಾರದೆಂಬ ನಿರ್ಧಾರ ಅವನದು.

"ಸರಿ. ನನ್ನ ಹಿಂದೆ ಬಾ" ಎಂದು ಕಾಪಾಲಿನಿ ಮುಂದಾಗಿ ಹೊರಕ್ಕೆ ನಡೆದಳು. ಹಿಂದೆಯೇ ಅವನೂ ನಡೆದನು.

ಸೂರ್ಯನು ಪಶ್ಚಿಮ ದಿಕ್ಕಿನಲ್ಲಿ ವಾಲಿಕೊಂಡಿದ್ದನು. ಕಾಪಾಲಿನಿ ಉತ್ತರ ದಿಕ್ಕಿನ ಕಡೆಗೆ ತಿರುಗಿ, ತೋರುಬೆರಳನ್ನು ತೋರಿಸುತ್ತ, "ಆ ದಿಕ್ಕಿನಲ್ಲಿ ನೂರು ಯೋಜನ ದೂರದಲ್ಲಿ ಶಂಖ ಮಾಂತ್ರಿಕನಿರುವ ಬೆಟ್ಟವೂ, ಅದರ ಮೇಲೆ ಅವನ ಮಂತ್ರಗೃಹವೂ ಇದೆ.. ಆ ಗೃಹದೊಳಗೆ ಪೂಜಾ ಮಂದಿರದಲ್ಲಿ ಅಪೂರ್ವ ಶಕ್ತಿಗಳಿರುವ ಶಂಖವು ಒಂದು

ನಾಗರಹಾವಿನ ಕೊರಳಲ್ಲಿ ನೇತಾಡಿಕೊಂಡಿರುತ್ತದೆ. ಆ ನಾಗರಹಾವು ಗೋಡೆಯಲ್ಲಿರುವ ಒಂದು ಆಣಿಗೆ ಸುತ್ತಿ ನೇತಾಡಿಕೊಂಡಿದೆ. ನೀನು ಮಾಂತ್ರಿಕನಾದ ಆ ಶಂಖನೊಂದಿಗೆ ಸ್ನೇಹ ಮಾಡಿಕೊಂಡೋ ಅಥವಾ ಅವನ ಪ್ರಾಣ ತೆಗೆದೋ ಅದನ್ನು ತೆಗೆದು ಕೊಂಡು ಬರಬೇಕಾಗುತ್ತದೆ. ಅದು ಆ ಸಮಯಕ್ಕೆ ನಿನಗೆ ತೋರುವ ಉಪಾಯದಂತೆ ವರ್ತಿಸಿದ ಹಾಯಿತು" ಎಂದಳು.

"ಅಷ್ಟು ದೊಡ್ಡ ಮಾಂತ್ರಿಕನನ್ನು ಕೊಲ್ಲುವು ದಾದರೂ ಸಾಧ್ಯವೆನ್ನುವಿಯಾ?" ಎಂದು ಚಂದ್ರ ವರ್ಮನು ಆಶ್ಚರ್ಯದಿಂದ ಕೇಳಿದನು.

"ಏಕೆ ಸಾಧ್ಯವಿಲ್ಲ? ಎಷ್ಟು ದೊಡ್ಡ ಮಾಂತ್ರಿಕ ನಾದರೂ ಯಾವುದೋ ಒಂದು ದಿನ ಸಾಯು ತ್ತಾನೆ. ಶಂಖನು ಮಾತ್ರ ಇದಕ್ಕೆ ವ್ಯತಿರೇಕದವ ನೇನಲ್ಲ. ಅವನನ್ನು ಹೇಗೆ ಹತಮಾಡಬೇಕೆಂಬು ದನ್ನು ಸಮಯ ಸಂದರ್ಭ ನೋಡಿ ನೀನೇ ತಿಳಿದು ಕೊಳ್ಳಬಲ್ಲೆ. ಆ ಸಾಮರ್ಥ್ಯ ನಿನಗೆ ತನ್ನಂತಾನೇ ಬರುತ್ತದೆಂದು ನಂಬು" ಎಂದಳು ಕಾಪಾಲಿನಿ.

"ಹಾಗಾದರೆ ಇನ್ನು ನಾನು ಹೊರಡುತ್ತೇನೆ" ಎಂದು ಹೇಳಿ ಚಂದ್ರವರ್ಮನು ತನ್ನ ದುಸ್ತನ್ನು ನೋಡಿಕೊಂಡು, ಒರೆಯಲ್ಲಿರುವ ಕತ್ತಿಯನ್ನು ಎಳೆದು ತಡವಿ ಒರೆಗೆ ಸೇರಿಸಿ, ಮುಂದೆ ನಡೆದನು.

ಅವನು ನಾಲ್ಕಡಿ ಮುಂದೆ ಇಡುವಷ್ಟರಲ್ಲಿ ಕಾಪಾಲಿನಿ ಆತುರದಿಂದ ಓಡಿಬಂದು, ಅವನ ಭುಜ ಹಿಡಿದು ನಿಲ್ಲಿಸಿ, "ಅಪ್ಪಾ, ಚಂದ್ರವರ್ಮಾ, ಮುಖ್ಯ ವಾದೊಂದು ಸಂಗತಿಯನ್ನು ಹೇಳಲಿಕ್ಕೆ ಮರೆತೇ ಹೋಯಿತು. ಶಂಖನ ಹತ್ತಿರ ಒಂದು ವಿಚಿತ್ರ ವಾದ ಪಕ್ಷಿ ಇದೆ. ಅದರ ಶಕ್ತಿಯನ್ನೂ, ವೇಗ ವನ್ನೂ ಅಷ್ಟಿಷ್ಟೆಂದು ಹೇಳಲು ಸಾಧ್ಯವಿಲ್ಲ. ಅದರ ಹೆಸರು ಅಗ್ನಿಪಕ್ಷಿ. ಅದು ಪ್ರತಿದಿನ ಕತ್ತಲಾದ ಮೇಲೆ ಆಹಾರಾನ್ವೇಷಣೆಗೆ ಹೊರಟುಹೋಗಿ,



ಮಧ್ಯರಾತ್ರಿಯ ಹೊತ್ತಿಗೆ ಹಿಂದಿರುಗಿ ಹೊರಟಲ್ಲಿಗೆ ಬರುತ್ತದೆ. ಅದು ಆಕಾಶದಲ್ಲಿ ಹಾರುವಾಗ ಅಗ್ನಿ ಜ್ವಾಲೆಯ ಹಾಗೆ ಪ್ರಕಾಶಿಸುತ್ತದೆ. ಆ ಗುರುತು ಹಿಡಿದು ನೀನು ದಾರಿ ತಪ್ಪದಂತೆ ಹೋಗಿ ಶಂಖ ಮಾಂತ್ರಿಕನ ಗೃಹವನ್ನು ಸೇರಬಹುದು. ನೀನು ಹೋಗಿ ಬರಬೇಕಾದ ದೂರವು ಇನ್ನೂರು ಯೋಜನ ಗಳಷ್ಟು ಆಗುತ್ತದೆ. ಈಗ ಹೇಳು. ಎಷ್ಟು ಕಾಲದಲ್ಲಿ ನೀನು ಕೆಲಸ ಮುಗಿಸಿ ಹಿಂದಿರುಗಿ ಬರುವಿ?" ಎಂದು ಕೇಳಿದಳು.

ಈ ಪ್ರಶ್ನೆ ಚಂದ್ರವರ್ಮನಿಗೆ ವಿಚಿತ್ರವಾಗಿಯೇ ತೋರಿತು. ಅಡವಿಗಳನ್ನೂ, ಗುಡ್ಡಬೆಟ್ಟಗಳನ್ನೂ, ನದಿಗಳನ್ನೂ ದಾಟಿಕೊಂಡು ನೂರು ಯೋಜನ ಹೋಗಬೇಕು, ಆಮೇಲೆ ಮಹಾ ಮಾಂತ್ರಿಕನನ್ನು ಸಮಾಳಿಸಿಕೊಂಡು ಶಂಖವನ್ನು ವಶಪಡಿಸಿಕೊಳ್ಳ ಬೇಕು. ಹಿಂದಿರುಗಲು ಮತ್ತೆ ನೂರು ಯೋಜನ ನಡೆಯಬೇಕು. ಮಾರ್ಗದಲ್ಲಿ ಎಷ್ಟೆಲ್ಲ ಅಪಾಯ

ಗಳನ್ನು ಇದಿರಿಸಬೇಕಾಗುವುದೋ ತಿಳಿಯದು. ಹೀಗಿರುವಾಗ ಇಂತಿಷ್ಟು ಕಾಲದಲ್ಲಿ ಹಿಂದಿರುಗಿ ಬರುವೆನೆಂದು ಹೇಳಲು ಸಾಧ್ಯವೆ ?

ಚಂದ್ರವರ್ಮನ ಆಲೋಚನೆಗಳನ್ನು ಕಂಡು ಹಿಡಿದವಳಂತೆ ಕಾಪಾಲಿನಿ, ನಡುಗುವ ಸ್ವರದಲ್ಲಿ "ಹೌದು, ಚಂದ್ರವರ್ಮಾ, ನೀನು ಮಾಡಬೇಕಾದ ಕಾರ್ಯಗಳು ನನಗೆ ಗೊತ್ತಿಲ್ಲವೆಂದಲ್ಲಪ್ಪಾ. ಆದರೆ ಇವತ್ತಿನಿಂದ ಒಂದು ವರ್ಷದೊಳಗೆ ನೀನು ಆ ಶಂಖವನ್ನು ತಂದು ನನಗೆ ಕೊಟ್ಟರೆ ಮಾತ್ರವೇ ಅದರಿಂದ ನನಗೆ ಉಪಯೋಗ. ಆ ಗಡುವಿಗೆ ಒಂದು ದಿನ ದಾಟಿದರೂ ಅದು ನನಗೆ ಯಾವ ಕೆಲಸಕ್ಕೂ ಬಾರದು. ಸರಿಯಪ್ಪ, ಯಾವ ಕಾರಣ ದಿಂದಾದರೂ ನೀನು ಒಂದು ವರ್ಷದೊಳಗೆ ಬಾರದೆ ಹೋದರೆ, ಇಲ್ಲಿ ನಾನು ಇರುವುದಿಲ್ಲ. ಆದರೆ ನಿನಗೆ ಮಾಡುತ್ತೇನೆಂದ ಸಹಾಯ ಮಾತ್ರ ಮರೆಯುವು ದಿಲ್ಲ. ಗಾಜಿನ ಗೋಳವಿರುವ ಮೇಜಿಯ ಅರೆ ಯೊಳಗೆ ಒಂದು ತಾಲಪತ್ರವನ್ನಿರಿಸಿ ಹೋಗುತ್ತೇನೆ. ನೀನು ಆ ಶಂಖವನ್ನು ಹೇಗೆ ಉಪಯೋಗಿಸ ಬೇಕೆಂಬುದನ್ನು ಆ ತಾಲಪತ್ರದಲ್ಲಿ ಬರೆದಿಡಲ್ಪಟ್ಟಿರು ತ್ತದೆ" ಎಂದಳು ಕಾಪಾಲಿನಿ.

ಆ ಬಗೆಯ ಅವಳ ಮಾತುಗಳನ್ನು ಕೇಳಿದ ಮೇಲೆ ಚಂದ್ರವರ್ಮನಿಗೆ ಅವಳ ಮೇಲೆ ಅಪಾರ ವಿಶ್ವಾಸವೆದ್ದಿತು. ಈ ಕಾಪಾಲಿನಿ ಮಾಂತ್ರಿಕಳು ತನಗೆ ಮೋಸ ಮಾಡುವವಳಲ್ಲವೆಂಬುದನ್ನು ನಂಬಿ ದನು. ಅವನು ಕಾಪಾಲಿನಿಯ ಎರಡು ಕೈಗಳನ್ನೂ ಹಿಡಿದು, "ಒಂದು ವರ್ಷದೊಳಗೆ ನಾನು ಆ ಶಂಖ ವನ್ನು ತೆಗೆದುಕೊಂಡು ಬಂದೇ ಬರುತ್ತೇನೆ. ದೃಢ ವಾಗಿ ನಂಬು" ಎಂದು ಹೇಳಿ ಕೈಗಳನ್ನು ಬಿಟ್ಟು ಮುಂದೆ ನಡೆದನು.

ಕಾಪಾಲಿನಿ "ಕಾಲನಾಗಾ !" ಎಂದು ಮೂರು ತಲೆಯ ಸರ್ಪವನ್ನು ಕರೆದಳು. ಸರ್ಪವು ಭುಸು ಗುಡುತ್ತಾ ಬಂದ ಕೂಡಲೇ ಅವಳು ಚಂದ್ರವರ್ಮ ನನ್ನು ಸರ್ಪಕ್ಕೆ ತೋರಿಸಿ, "ಅವನು ಈ ಅಡವಿ ಯನ್ನು ದಾಟುವವರೆಗೂ ರಕ್ಷಣೆಯಾಗಿದ್ದು ಕರೆ ದೊಯ್ದು ಬಿಟ್ಟು ಬಾ" ಎಂದಳು.

ಕಾಲನಾಗವು ಒಂದೇ ಹಾರಿಕೆಗೆ ಚಂದ್ರವರ್ಮನ ಮುಂದೆ ಹೋಗಿ, ಅವನಿಗೆ ದಾರಿ ತೋರಿಸಿಕೊಂಡು ಸಾಗಿತು. ಚಂದ್ರವರ್ಮನು ಮರಗಳನ್ನು ದಾಟಿ ಕೊಂಡು ಸ್ವಲ್ಪದೂರ ಹೋಗಿ ಒಮ್ಮೆ ಹಿಂದಿರುಗಿ ನೋಡಿದನು.

ಕಾಪಾಲಿನಿಯ ಗುಹೆ ಮನೆಯ ಬಾಗಿಲಿದ್ದ ಜಾಗದಲ್ಲಿ ದೊಡ್ಡ ಹದ್ದಿನ ತಲೆಯೂ, ರೆಕ್ಕೆಗಳೂ ಇರುವ ಸಿಂಹ ಶರೀರದ ಭಯಂಕರ ವಿಕೃತಾಕಾರ ವಿರುವುದು ಕಂಡಿತು. — (ಇನ್ನೂ ಇದೆ)






# ದಯಾಗುಣ

**ಈ** ಸಾರಿ ಉತ್ತರ ಹೇಳಲಾಗದ ಜಟಿಲ ಸಮಸ್ಯೆಯನ್ನೇ ಒಡ್ಡಿ ಈ ಶಠಗಾರ ರಾಜನನ್ನು ಸೋಲಿಸದೆ ಬಿಡಲಾರೆನೆಂದು ಕೊಂಬೆಯಲ್ಲಿ ನೇತಾಡಿಕೊಂಡು ಕಥೆ ಹೆಣೆದುಕೊಂಡಿದ್ದ ಬೇತಾಳಾವೇಶಿತವಾದ ಶವವನ್ನು ತ್ರಿವಿಕ್ರಮ ರಾಜನು ಕೆಳಗಿಳಿಸಿ, ತನ್ನ ಹೆಗಲ ಮೇಲೆ ಹಾಕಿಕೊಂಡು ಮೌನವಾಗಿ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗಿನ ಬೇತಾಳವು ಮಾತಾಡಲು ತೊಡಗಿತು: "ಎಲೈ ಮಹಾರಾಜನೇ, ನೀನು ಅಪಾರ ದಯಾಗುಣದವನೆಂದು ತಿಳಿದು ಯಾರೋ ನಿನ್ನಿಂದ ಏನೋ ಮಾತು ಪಡೆದು ಇಂತಹ ಕಾರ್ಯದಲ್ಲಿ ಸಿಕ್ಕಿಸಿದ್ದಾರೆಂದು ತೋರುತ್ತದೆ. ಮನುಷ್ಯನಿಗಿರುವ ಎಲ್ಲಾ ಗುಣಗಳಲ್ಲಿ ದಯಾಗುಣವು ದೊಡ್ಡ ಭೂಷಣವೆಂಬುದೇನೋ ನಿಜ. ಆದರೆ ಅದನ್ನು ವಿಚಕ್ಷಣೆ ಇಲ್ಲದೆ ಪ್ರದರ್ಶಿಸಿಬಿಟ್ಟರೆ ಅನೇಕ ಅನರ್ಥಗಳಿಗೆ ಕಾರಣವಾಗುತ್ತದೆ. ಇದಕ್ಕೆ ಉದಾಹರಣೆಯಾಗಿ ನಿನಗೆ ದಯಾನಿಧಿ ಎಂಬ ಶ್ರೀಮಂತನೊಬ್ಬನ ಕಥೆಯನ್ನು ಹೇಳುತ್ತೇನೆ. ಕಥೆ ಕೇಳುತ್ತಾ ಹೋಗುವುದರಿಂದ ನಡೆಯುವ ಶ್ರಮ ತಿಳಿಯಲಾರದಷ್ಟೆ?"

## ಬೇತಾಳಕಥೆಗಳು?..



ಹೀಗೆ ಹೇಳಿ ಅದು ಹೇಳ ತೊಡಗಿದ ಕಥೆ ಏನೆಂದರೆ, ಒಂದಾನೊಂದು ಊರಿನಲ್ಲಿ ದಯಾನಿಧಿ ಎಂಬ ದೊಡ್ಡ ಧನವಂತನಿದ್ದನು. ಅವನು ಹೆಸರಿಗೆ ತಕ್ಕ ಹಾಗೆ ದಯಾಗುಣದಿಂದ ತುಂಬಿಕೊಂಡಿರುವವನು. ತನ್ನ ಮೇಲೆ ತಪ್ಪು ಮಾಡಿದವರನ್ನು ಕೂಡಾ ಮನಃಪೂರ್ವಕವಾಗಿ ಕ್ಷಮಿಸಿಬಿಡುತ್ತಿದ್ದನು. ಯಾರಾದರೂ ತಪ್ಪು ಮಾಡಿದರೆ ಕೂಡಾ, ಏಕೆ ಆ ತಪ್ಪು ಮಾಡಿದರೆಂದು ಆಲೋಚಿಸಿ ಮತ್ತೆ ಆ ತಪ್ಪು ಮಾಡದಂತೆ ನೀತಿ ಬೋಧನೆ ಮಾಡುತ್ತಿದ್ದನು.

ಅಂತಹ ದಯಾನಿಧಿಯ ಮನೆಯಲ್ಲಿ ರಾಮನೆಂಬ ಸೇವಕನೊಬ್ಬನಿದ್ದನು. ಅವನು ಚಿಕ್ಕತನದಿಂದಲೂ ದಯಾನಿಧಿಯ ಮನೆಯಲ್ಲೇ ಬೆಳೆದವನು. ಆದುದರಿಂದ ಉಳಿದ ಕೆಲಸದಾಳುಗಳ ಮೇಲಿನದಕ್ಕಿಂತಲೂ ರಾಮನ ಮೇಲೆ ದಯಾನಿಧಿಯ ಅಭಿಮಾನದಲ್ಲಿ ಒಂದು ಪ್ರತ್ಯೇಕತೆ ಇದ್ದಿತು. ಹೀಗೆಯೇ ದೊಡ್ಡವನಾದ ಮೇಲೆ ರಾಮನಿಗೆ ಮದುವೆಯಾಯಿತು.

ರಾಮನಿಗೆ ಹೆಂಡತಿಯ ಮೇಲೆ ತುಂಬಾ ಪ್ರೀತಿಯಿದ್ದಿತು. ಆದುದರಿಂದ ಅವಳೊಂದಿಗೆ ತನ್ನ ಯಜಮಾನರ ಗುಣಗಳನ್ನೂ, ತನ್ನ ಮೇಲೆ ಅವರಿಗಿರುವ ಪ್ರೀತಿಯನ್ನೂ ಹೊಗಳಿಕೊಂಡು ಹೇಳುತ್ತಿದ್ದನು. ಯಜಮಾನರಿಂದ ತನಗೆ ಎಷ್ಟೆಷ್ಟು ಉಪಕಾರವಾಯಿತೋ ಅದನ್ನೆಲ್ಲಾ ಹೇಳುತ್ತಿದ್ದನು.

ರಾಮನ ಹೆಂಡತಿ ಬಹುದೊಡ್ಡ ಆಶಾಪಾತಕಿಯವಳು. ಒಂದು ದಿನ ಅವಳು ರಾಮನೊಂದಿಗೆ "ನಿಮ್ಮ ಯಜಮಾನರನ್ನು ಕುರಿತು ಇಷ್ಟೆಲ್ಲಾ ಸಮಾಚಾರ ಹೇಳುವಿರಿ, ಅದೆಲ್ಲ ಸರಿ. ಅವರ ಮನೆಯಲ್ಲಿ ಬೇಕಾದಷ್ಟು ಪಟ್ಟೇ ಸೀರೆಗಳಿವೆ ಅನ್ನುವಿರಿ. ನನಗೆ ಒಂದೇ ಒಂದಾದರೂ ಅಂತಹ ಸೀರೆ ಇದೆಯೋ ? ಅವರ ಹೆಂಡತಿಗೆ, ಮಗಳಿಗೆ ಎಂತೆಂಥವೋ ನಗನಟ್ಟುಗಳೆಲ್ಲಾ ಇವೆ. ನನಗೆ ಒಂದೇ ಒಂದು ಕೂಡಾ ಇಲ್ಲ. ಈ ಸಂಗತಿ ನಿಮಗೆ ಗೊತ್ತಾಗುವುದಿಲ್ಲವೇಕೆ ? ಅವರು ಉಣ್ಣುವುದು ತಿನ್ನುವುದನ್ನೇ ಹೇಳುತ್ತಾ ಇದ್ದರೆ, ನಮ್ಮ ಹೊಟ್ಟೆ ತುಂಬುವುದೇನು ? " ಎಂದಳು.

ರಾಮನಿಗೆ ಸ್ವಲ್ಪ ಎಚ್ಚರಿಕೆ ಬಂದ ಹಾಗಾಯಿತು. ಹೆಂಡತಿಯ ಮಾತು ನಿಜವೆಂದೂ ತೋರಿತು. ಆದರೆ ಅವನು ಇದುವರೆಗೂ ತನಗೆ ಇದು ಬೇಕು, ಅದು ಬೇಕು ಎಂದು ಯಜಮಾನರನ್ನು ಕೇಳಿದ್ದಿಲ್ಲ. ಮನಸ್ಸಿನಲ್ಲೂ ನೆನೆದಿರಲಿಲ್ಲ. ಅವನಿಗೆ ಬೇಕಾದುದನ್ನೆಲ್ಲ ದಯಾನಿಧಿಯೇ ಕಂಡುಕೊಂಡು ಕೇಳದೆಯೇ ಕೊಡುತ್ತಿದ್ದನು. ಅಂಥವು ಸಿಕ್ಕಿದ ಮೇಲೆ, ಅವು ತನಗೆ ಬೇಕಾದುವೇ ಎಂದು ರಾಮನಿಗೆ ಗೊತ್ತಾಗುತ್ತಿತ್ತು.

ರಾಮನು ತನ್ನ ಹೆಂಡತಿ ಹೇಳಿದ ಮಾತುಗಳನ್ನು, ತನ್ನ ಹಾಗೇ ಅಲ್ಲಿ ಕೆಲಸ ಮಾಡುವ ಬೇರೆ ಆಳುಗಳೊಂದಿಗೆ ಹೇಳಿ ನೋಡಿದನು. ಅದನ್ನು ಕೇಳಿ ಅವರು ಅವನನ್ನೇ ಮೂದಲಿಸಿ, "ಇದನ್ನೆಲ್ಲ ಏಕೆ ದೊಡ್ಡ ವಿಷಯ ಮಾಡಿಕೊಳ್ಳುತ್ತೀ ? ಯಾರ



ಬುದ್ಧಿವಂತಿಕೆ ಎಷ್ಟರ ಮಟ್ಟಿನದೋ ಅದಕ್ಕೆ ತಕ್ಕ ಹಾಗೆ ಅವರ ಸಂಫಾದನೆ ಇರುತ್ತೆ. ನಮ್ಮ ಯಜಮಾನರಂಥವರು ಸೌಖ್ಯವಾಗಿದ್ದರೇನೇ ನಮ್ಮ ದಿನಗಳು ಕೂಡಾ ಸುಖವಾಗಿ ಕಳೆಯುತ್ತವೆ. ಈಗ ಇಲ್ಲಿ ನಾವು ಮಾಡುವ ಕೆಲಸವನ್ನೇ ಇನ್ನೊಬ್ಬರ ಹತ್ತಿರ ಹೋಗಿ ಮಾಡಿದರೆ, ಈ ಯಜಮಾನರು ಕೊಡುವ ಹಾಗೆ ಯಾರೂ ಕೊಡಲಾರರು. ಅದರ ಮೇಲೆ ನಮ್ಮೆಲ್ಲರ ಮೇಲಿಗಿಂತಲೂ ನಿನ್ನ ಮೇಲೆ ಅವರ ಅಭಿಮಾನ ಹೆಚ್ಚು. ಇಂಥವರ ಮೇಲೆ ಮನಸ್ಸು ಕೆಡಿಸಿಕೊಳ್ಳಬೇಡ" ಎಂದು ಬುದ್ಧಿಯನ್ನು ಹೇಳಿದರು.

ರಾಮನಿಗೆ ಅವರು ಹೇಳಿದುದು ನಿಜವೆನಿಸಿತು. ಆ ಸಂಗತಿಯನ್ನೇ ಅವನು ಹೆಂಡತಿಯೊಂದಿಗೂ ಹೇಳಿದನು. "ಹಾಗಾದರೆ ನೀವು ಇಲ್ಲಿ ಕೆಲಸ ಮಾಡಿಕೊಂಡಿರುವಷ್ಟು ಕಾಲವೂ ಯಾವ ಏರುಪೇರುಗಳೂ ಇಲ್ಲವೆಂದಾಯಿತು. ಅದರ ಬದಲಿಗೆ ನೀವು ಕೂಡಾ ನಿಮ್ಮ ಯಜಮಾನರ ಹಾಗೆಯೇ ಬೇರೆನಾದರೂ ಸ್ವಂತ ಕೆಲಸ ಮಾಡಿಕೊಂಡು ಹಣ ಸಂಪಾದನೆ ಮಾಡಿದರೆ ಒಳ್ಳೆಯ ಲಾಭ ಬರುತ್ತದೆ. ಇವರು ತಡೆಯುವರೆಂದು ಹೆದರುವಿರಾ? ಹೀಗೆ ಹೆದರುವವರು ಎಂದೂ ಮೇಲೆ ಬಾರರು" ಎಂದು ಹೇಳಿದಳು ಹೆಂಡತಿ.

"ನನಗೆ ಅಷ್ಟರಮಟ್ಟಿಗೆ ಬುದ್ಧಿವಂತಿಕೆ ಇಲ್ಲ" ಎಂದನು ರಾಮು.

"ಹಾಗಾದರೆ ಕಳ್ಳತನ ಮಾಡಿರಿ. ಎಷ್ಟೋ ಜನರು ಮಾಡುತ್ತಾರೆ" ಎಂದಳು ಹೆಂಡತಿ ಹಟ ಹಿಡಿದವಳಂತೆ.

ಕಳ್ಳತನದ ಹೆಸರು ಕೇಳಿದ ಕೂಡಲೇ ರಾಮನು ಹೆದರಿದನು. ಹೇಗೆ ಮಾಡಬೇಕು? ಎಲ್ಲಿ ಮಾಡಬೇಕು? ಗೊತ್ತಾಗಲಿಲ್ಲ ಅವನಿಗೆ. ಅದನ್ನೂ ಹೆಂಡತಿಯೇ ಹೇಳಿದಳು. "ಯಾಕೆ ಹಾಗೆ ಪಿಳಿಪಿಳಿ ನೋಡ್ತೀರಿ? ಮನಸ್ಸೊಂದಿದ್ದರೆ ನಿಮಗೆ ಕಳ್ಳತನ ಮಾಡುವುದು ಬಹು ಸುಲಭ. ಅದಕ್ಕಾಗಿ ಎಲ್ಲಿಗೂ ಹೋಗಬೇಕಾಗಿಲ್ಲ. ನಿಮ್ಮ ಯಜಮಾನರ ಮನೆಯೊಳಗೇ ಮಾಡಿಬಿಡಿ. ಹೇಗೂ ಅವರಿಗೆ ನಿಮ್ಮ ಮೇಲೆ ಬಹಳ ನಂಬುಗೆ ಇದೆ. ಆದುದರಿಂದ ಎಲ್ಲವೂ ನಿಮಗೆ ಸಿಗುವ ಹಾಗೆಯೇ ಇರುತ್ತವೆ. ಯಾವುದಾದರೂ ಒಳ್ಳೆಯ ಬೆಲೆ ಬಾಳುವಂಥಾದ್ದು ಎತ್ತಿಕೊಂಡು ಬಂದುಬಿಡಿ. ಆ ಹಣದಿಂದ ಎಲ್ಲಿಗಾದರೂ ಹೋಗಿ ಏನೋ ಒಂದು ವ್ಯಾಪಾರ ಮಾಡಿ ತುಂಬಾ ಲಾಭ ಸಂಪಾದಿಸಿಬಿಡಬಹುದು. ಆಮೇಲೆ ನನಗೆ ಬೇಕಾದ ಪಟ್ಟೇ ಸೀರೆ, ನಗಗಳು ಎಲ್ಲಾ ಬರುತ್ತೆ! ನಾನು ಚೆನ್ನಾಗಿದ್ದರೆ ನಿಮಗೆ ಸಂತೋಷವಾಗುತ್ತೋ ಇಲ್ಲವೋ?" ಎಂದಳು ರಾಮನ ಹೆಂಡತಿ.

ಅದಕ್ಕೆ ರಾಮನು ಕೂಡಲೇ ಒಪ್ಪದಿದ್ದರೂ, ಹೆಂಡತಿ ಆಗಾಗ ತಿವಿತಿವಿದು ಹೇಳುತ್ತಾ ಇದ್ದುದರಿಂದ, ಹಾಗೇ ಮಾಡುವುದೆಂದು ಮನಸ್ಸು ಗಟ್ಟಿ

ಮಾಡಿಕೊಂಡು ಸಂದರ್ಭ ಹೊಂಚು ಹಾಕುತ್ತಿದ್ದನು. ಒಂದು ದಿನ ಅವನು ದಯಾನಿಧಿಯ ಮನೆಯೊಳಗೆ ಕಳ್ಳನೋಟ ಬೀರಿಕೊಂಡು ತಿರುಗುತ್ತಿರಲು, ಒಂದು ಕೋಣೆಯೊಳಗೆ ಕಬ್ಬಿಣದ ಪೆಟ್ಟಿಗೆ ತೆರೆದಿರುವುದನ್ನು ಗಮನಿಸಿದನು. ಅವನು ಅತ್ತಿತ್ತ ನೋಡಿ, ಯಾರೂ ಇಲ್ಲದ ಸಮಯವನ್ನು ಸಾಧಿಸಿಕೊಂಡು, ಪೆಟ್ಟಿಗೆಯೊಳಗಿನಿಂದ ಒಂದು ವರಹಗಳ ಚೀಲವನ್ನು ಅಪಹರಿಸಿ, ಬೇಗಬೇಗನೆ ಮನೆಗೆ ಹೋಗಿ ಅದನ್ನು ಹೆಂಡತಿಯ ಕೈಗೆ ಕೊಟ್ಟನು.

ಅವನ ಹೆಂಡತಿ ಅದರೊಳಗಿದ್ದ ವರಹಗಳನ್ನು ಎಣಿಸುತ್ತ, "ಅಬ್ಬ ! ಎಷ್ಟಿವೆ ! ಬೇಕಾದಷ್ಟಿವೆ !" ಎನ್ನುತ್ತ ಮತ್ತೆ ಮತ್ತೆ ಎಣಿಸಿದಳು.

ಮರುದಿನ ದಯಾನಿಧಿಗೆ ಮನೆಯೊಳಗಿನ ಪೆಟ್ಟಿಗೆಯಲ್ಲಿ ಹಣದ ಚೀಲವೊಂದು ಕಾಣೆಯಾದ ಸಂಗತಿ ಗೊತ್ತಾಯಿತು. ಅದನ್ನು ನೋಡಿ ಅವನು ವಿಚಾರ ಕ್ಕೊಳಗಾಗಿ, "ಇದು ಹೊರಗಿನ ಕಳ್ಳರ ಕೆಲಸವಲ್ಲ" ಎಂದು ಖಂಡಿತ ಮಾಡಿಕೊಂಡು, ತನ್ನ ಆಳುಗಳನ್ನೆಲ್ಲಾ ಕರೆದು ಸಮಾಚಾರವನ್ನು ಹೇಳಿ, "ನಿಮ್ಮಲ್ಲಿ ಯಾರೋ ಒಬ್ಬರು ಈ ಕಳ್ಳತನ ಮಾಡಿದ್ದಾರೆ. ತಪ್ಪು ನನ್ನದೇ ಆಗಿದ್ದೀತು. ನಿಮಗೆ ನನ್ನ ಮೇಲೆ ಅಭಿಮಾನ ತಗ್ಗಿದೆ. ಏನೋ ಅವಿಶ್ವಾಸ ಬಂದಿದೆ" ಎಂದನು. ಆಗ ಅವನ ಕಣ್ಣುಗಳು ನೆನೆದುಕೊಂಡವು.

ಕಳ್ಳತನ ನಡೆದು ಆಳುಗಳ ಮೇಲೆ ಸಂದೇಹ ಬಂದ ಒಡೆಯನು ಕೋಪದಿಂದ ಗದರಿಸಿ ಕೇಳುವುದಕ್ಕೆ ಬದಲಾಗಿ, ತಾನೇ ಸಂಕಟಪಡುವುದನ್ನು ನೋಡಿ ಆಳುಗಳಿಗೆಲ್ಲಾ ಭಯಭಕ್ತಿಗಳೊಂದಿಗೆ ಅವನ ಮೇಲಿದ್ದ ಗೌರವಾಭಿಮಾನಗಳು ಇಮ್ಮಡಿಯಾದುವು.

ಆಗ ಆಳುಗಳಲ್ಲಿ ಇಬ್ಬರು ಒಡೆಯನಿಗೆ ಕೈ ಮುಗಿದು, "ಅಯ್ಯಾ, ನಾವಿಬ್ಬರೂ ಹೋಗಿ ಎಲ್ಲಾ ಕೆಲಸದವರ ಮನೆಗಳನ್ನೂ ಶೋಧಿಸಿ ಬರುತ್ತೇವೆ. ಅಷ್ಟರವರೆಗೂ ಉಳಿದವರೆಲ್ಲಾ ಇಲ್ಲೇ ಇರಲಿ" ಎಂದು ಹೇಳಿ, ತಾವು ಬರುವವರೆಗೂ ಎಲ್ಲರೂ ಇಲ್ಲೇ ಇರಬೇಕೆಂದು ಹೇಳಿ ಹುಡುಕಲು ಹೋದರು. ಹಾಗೆ ಅವರು ಮನೆ ಮನೆ ಶೋಧಿಸುವಾಗ,



ಕಳವಾದ ಹಣದ ಚೀಲವು ರಾಮನ ಮನೆಯಲ್ಲಿ ಸಿಕ್ಕಿತು. ಇನ್ನು ತನ್ನ ಗತಿ ಏನಾಗುವುದೋ ಎಂದು ರಾಮನು ನಖಶಿಖಾಂತವಾಗಿ ಕಂಪಿಸತೊಡಗಿದನು.

ದಯಾನಿಧಿ ರಾಮನನ್ನು ಪ್ರತ್ಯೇಕವಾಗಿ ಕರೆದು, "ರಾಮಾ, ನಿನಗೆ ಏನು ಬೇಕಾದರೂ ನಾನು ಕೊಡುತ್ತಾ ಇದ್ದೇನಪ್ಪ ? ಕಳ್ಳತನ ಏಕೆ ಮಾಡಿದಿ ? ನನ್ನಿಂದ ನಿನಗೇನಾದರೂ ಕೊರತೆಯಾಯಿತೇನು ? " ಎಂದು ದುಃಖಿಸುತ್ತ ಕೇಳಿದನು.

" ರಾಮನು ಅವನ ಕಾಲಮೇಲೆ ಬಿದ್ದು, ಬಳಬಳನೆ ಕಣ್ಣೀರು ಸುರಿಸಿದನು. ದಯಾನಿಧಿ ಅವನನ್ನು ಕ್ಷಮಿಸಿ, " ಹೋಗಲಿ ಬಿಡು. ಇನ್ನೆಂದಿಗೂ ಇಂತಹ ಕೆಲಸ ಮಾಡಬೇಡ, ಹೋಗು " ಎಂದು ಅವನ ಬೆನ್ನು ತಟ್ಟಿ ಕಳುಹಿಸಿದನು.

ಆಮೇಲೆ ರಾಮನು ಮತ್ತೆ ಯಜಮಾನನ ಮನೆಯಲ್ಲಿ ಕಳ್ಳತನ ಮಾಡಲಿಲ್ಲ. ಆದರೆ ಅಲ್ಲಿ ಅವನಿಗೆ ಜೀವನ ಕಳೆಯುವುದು ಬಹಳ ಕಷ್ಟವಾಯಿತು. ಒಂದುಕಡೆ ಹಣ ಹಣವೆಂದು ಹೆಂಡತಿ ಕಾಡಿಸುತ್ತಿದ್ದಾಳೆ. ಮತ್ತೊಂದು ಕಡೆ ಉಳಿದ ಆಳುಗಳೆಲ್ಲರೂ ಕಳ್ಳ ಕಳ್ಳ ಎಂದುಕೊಂಡು ಹೇಳನೆಮಾಡುತ್ತ ಸಣ್ಣ ದೃಷ್ಟಿಯಿಂದ ನೋಡುತ್ತಿದ್ದಾರೆ.

ಒಂದು ದಿನ ರಾಮನು ದಯಾನಿಧಿಯ ಬಳಿಗೆ ಹೋಗಿ, " ಅಯ್ಯಾ, ಈ ಮನೆಯಲ್ಲಿ ಎಲ್ಲರೂ ನನ್ನನ್ನು ಕಳ್ಳನೆಂದೇ ಅನುಮಾನಿಸಿಕೊಂಡಿದ್ದಾರೆ, ನಾನು ಬೇರೆ ಎಲ್ಲಿಗಾದರೂ ಹೋಗಿಬಿಡುತ್ತೇನೆ. ಅಪ್ಪಣೆ ಕೊಡಿ ಸ್ವಾಮಿ " ಎಂದನು.

ಯಾರೂ ಹಾಗೇನೂ ಹೇಳದಂತೆ ಉಳಿದವರನ್ನೆಲ್ಲ ತಾನು ಬಾಯಿ ಮುಚ್ಚಿಸುತ್ತೇನೆಂದು ದಯಾನಿಧಿ ಹೇಳಿದನು. ಅವನ ಹೆಂಡತಿಗೆ ಒಂದು ಪಟ್ಟೇ ಸೀರೆ ಕೊಡುವೆನೆಂದೂ ಹೇಳಿದನು. ಹೀಗೆ ರಾಮುನಿಗೆ ಸಮಾಧಾನ ಹೇಳುತ್ತ, " ನೀನು ಇಲ್ಲಿರುವುದೇ ಒಳ್ಳೇದು. ಮತ್ತೊಂದು ಕಡೆಗೆ ಹೋದರೆ ತುಂಬಾ ಕಷ್ಟಪಡಬೇಕಾಗುತ್ತದೆ. ನೀನು ಚಿಕ್ಕತನದಿಂದಲೇ ನಮ್ಮಲ್ಲಿ ಇದ್ದವನಾದುದರಿಂದ ನಿನ್ನ ಮೇಲೆ ನನಗೆ ಪ್ರತ್ಯೇಕ ಅಕ್ಕರೆ. ಇನ್ನೂ ನೀನು ಹೋಗುವೆನೆಂದರೆ



ನನ್ನಿಂದಲೇ ಏನೋ ತಪ್ಪು ನಡೆದಿದೆಯೋ ಎಂದು ಅನುಮಾನವಾಗುತ್ತದೆ. ನೀನು ಕೆಲಸ ಮಾಡದೆ ಸುಮ್ಮನಿದ್ದರೂ ಸಾಕು. ಹೊರಟು ಹೋಗುತ್ತೇನೆಂದು ಮಾತ್ರ ಹೇಳಬೇಡ" ಎಂದನು.

ಎಷ್ಟು ಹೇಳಿದರೂ ರಾಮನು ಕೇಳದಿರುವಾಗ, ದಯಾನಿಧಿ ಅವನ ಕೈಗೆ ಸ್ವಲ್ಪ ಹಣವನ್ನು ಕೊಟ್ಟು, "ಸರಿ. ಎಲ್ಲಿಗೆ ಹೋದರೂ ನೀನು ಸುಖವಾಗಿರಬೇಕು. ಅದೇ ನನ್ನ ಆಸೆ" ಎಂದನು.

ರಾಮನು ಹೊರಟುಹೋದನು.

ದಯಾನಿಧಿಯ ಹೆಂಡತಿ ನಡೆದ ಸಂಗತಿಯನ್ನು ತಿಳಿದು ಗಂಡನೊಂದಿಗೆ, "ಆ ರಾಮನು ಕಳ್ಳತನ ಮಾಡಿದ್ದು ಗೊತ್ತಾದ ಕೂಡಲೇ ಆ ಹಣದ ಚೀಲ ಅವನಿಗೇ ಕೊಟ್ಟುಬಿಡಬೇಕಿತ್ತು. ಹಾಗೆ ಮಾಡಿದ್ದರೆ ನಿಮ್ಮ ಮೇಲೆ ಅವನಿಗೆ ಗಟ್ಟಿ ಅಭಿಮಾನವಾಗುತ್ತಿತ್ತು. ಏನನ್ನುವಿರಿ?" ಎಂದಳು. ಅದಕ್ಕೆ ದಯಾನಿಧಿ, "ಹಾಗೆ ಮಾಡಿದರೆ ಪ್ರತಿ ಕೆಲಸದವನೂ ದಿನಕ್ಕೊಂದು ಕಳವು ಮಾಡಲು ತೊಡಗುತ್ತಾನೆ. ಕಳ್ಳತನ ಮಾಡಿದ ಹಣ ಕಳ್ಳನಿಗೇ ಬಹುಮಾನ ಕೊಡುವುದು ಒಳ್ಳೆಯ ಪದ್ಧತಿಯಲ್ಲ" ಎಂದನು.

ಆಮೇಲೆ ಅನೇಕ ವರ್ಷಗಳು ಕಳೆದುವು. ದಯಾನಿಧಿ ಮುದುಕನಾದನು. ಅವನ ಮಗನು ತಂದೆಯ ಎಲ್ಲಾ ವ್ಯಾಪಾರ ವ್ಯವಹಾರಗಳನ್ನೂ ನೋಡಿಕೊಂಡಿದ್ದನು.

ಒಂದು ದಿನ ರಾತ್ರಿ ಸುಮಾರು ಇಪ್ಪತ್ತು ವರ್ಷ ವಯಸ್ಸಿನ ಯುವಕನೊಬ್ಬನು, ದಯಾನಿಧಿಯ ಮನೆಯಲ್ಲಿ ಕಳ್ಳತನ ಮಾಡಲು ಪ್ರವೇಶಿಸಿ ಸಿಕ್ಕಿಬಿದ್ದುಬಿಟ್ಟನು. ಅವನು ದಯಾನಿಧಿಯ ಕಾಲುಗಳ ಮೇಲೆ ಬಿದ್ದು, "ಅಯ್ಯಾ, ನನ್ನನ್ನು ಕ್ಷಮಿಸಿ ಬಿಟ್ಟುಬಿಡಿ. ನಾನು ನಿಮ್ಮ ಮನೆಯಲ್ಲಿ ಕೆಲಸ ಮಾಡಿಕೊಂಡಿದ್ದು ಹೊರಟುಹೋದ ರಾಮನ ಮಗ ಸ್ವಾಮಿ" ಎಂದನು.

ದಯಾನಿಧಿ ಆಶ್ಚರ್ಯಪಟ್ಟು ರಾಮನ ವಿವರಗಳನ್ನು ಕೇಳಿದನು.

ರಾಮನು ಹೊರಟು ಹೋದ ಮೇಲೆ, ದಯಾನಿಧಿ ಕೊಟ್ಟ ಹಣದಿಂದ ತರಕಾರಿಗಳ ವ್ಯಾಪಾರವನ್ನು ಪ್ರಾರಂಭಿಸಿದನು. ಅದರಲ್ಲಿ ಬರುವ ಲಾಭವು ತಿಂಡಿ ಬಟ್ಟೆಗಳಿಗೇ ಸಾಲುತ್ತಿರಲಿಲ್ಲ. ಅವನ ಹೆಂಡತಿ ಹಣದ ಆಸೆಯಿಂದ ಮಗನನ್ನು ಕಳ್ಳತನಕ್ಕೆ ಪ್ರೋತ್ಸಾಹಪಡಿಸಿ ಕಳುಹಿಸುತ್ತಿದ್ದಳು.

"ಹಾಗಾದರೆ ನೀನು ನನ್ನ ಮನೆಗೇ ಕಳ್ಳತನ ಮಾಡಲು ಬಂದೆ ಏಕೆ?" ಎಂದು ದಯಾನಿಧಿ ಕೇಳಿದನು. ರಾಮನಿಗೆ ಇನ್ನೂ ತನ್ನ ಮೇಲೆ ಹಗೆ ಇದ್ದುದರಿಂದ ತನ್ನ ಮಗನನ್ನು ಹೀಗೆ ಕಳುಹಿಸಿರಬೇಕೆಂದು ದಯಾನಿಧಿಗೆ ತೋರಿತು.

"ಈ ಊರಿನಲ್ಲಿ ಮೊದಲನೇ ಕಳ್ಳತನವನ್ನು ನಿಮ್ಮ ಮನೆಯಲ್ಲೇ ಮಾಡಬೇಕೆಂದು ಅಪ್ಪ ಹೇಳಿ

ದರು. ಕಳ್ಳತನ ಮಾಡಲಿಕ್ಕೆ ನಿಮ್ಮ ಮನೆ ಅನುಕೂಲವಾಗಿರುತ್ತದಂತೆ, ಒಂದು ವೇಳೆ ಸಿಕ್ಕಿ ಬಿದ್ದರೂ ನೀವು ಕ್ಷಮಿಸಿ ಬಿಡುವಿರಂತೆ!" ಎಂದನು ರಾಮನ ಮಗ.

ಕೂಡಲೇ ದಯಾನಿಧಿ ರಾಮನ ಮಗನನ್ನು ಆಪ್ಯಾಯತೆಯಿಂದ ಬೆನ್ನು ತಟ್ಟಿ ತಲೆ ತಡವಿ, "ಇನ್ನೆಂದಿಗೂ ಕಳ್ಳತನ ಮಾಡಬೇಡ. ವ್ಯಾಪಾರ ದಲ್ಲಿ ನೀನು ನನ್ನ ಹಾಗೆಯೇ ಮೇಲೆ ಬರಲು ಬೇಕಾದ ಏರ್ಪಾಟು ಮಾಡುತ್ತೇನೆ. ಇಲ್ಲಿ ನನ್ನೊಂದಿಗೇ ಇರು!" ಎಂದನು.

ಬೇತಾಳವು ಇಲ್ಲಿಗೆ ಕಥೆಯನ್ನು ನಿಲ್ಲಿಸಿ, "ರಾಜಾ, ಕಳ್ಳತನ ಮಾಡುವಾಗಲೇ ಸಿಕ್ಕಿಬಿದ್ದ ರಾಮನ ಮಗ ನನ್ನು ದಯಾನಿಧಿ ಶಿಕ್ಷಿಸುವುದಕ್ಕೆ ಬದಲಾಗಿ, ಅವನನ್ನು ವ್ಯಾಪಾರದಲ್ಲಿ ತನ್ನ ಹಾಗಾಗುವಂತೆ ಮಾಡಲು ಪ್ರಯತ್ನಿಸುವುದರಲ್ಲಿ ಏನು ಅರ್ಥವಿದೆ? ಆಲೋಚನೆಮಾಡಿ ನೋಡದೆ, ಅವನು ಪ್ರದರ್ಶಿಸುವ ದಯಾಗುಣದಿಂದ, ಮತ್ತೆ ಕೆಲವರು ಕೂಡಾ ಕಳ್ಳ ರಾಗುವ ಅಪಾಯವಿದೆಯಷ್ಟೇ? ಅಸಲು ದಯಾ ನಿಧಿಯಲ್ಲಿರುವುದು ಕೇವಲ ಮುಗ್ಧಭಾವವೋ, ದಯಾಗುಣವೋ ಎಂಬುದೇ ಸಂದೇಹವಾಗಿದೆ. ಇದಕ್ಕೆ ತಕ್ಕ ಉತ್ತರ ಗೊತ್ತಿದ್ದೂ ಹೇಳದೆ ಹೋದರೆ ನಿನ್ನ ತಲೆ ಒಡೆಯುವುದು ಖಂಡಿತ" ಎಂದಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಸಮಾಜ ದಲ್ಲಿ ದಯಾನಿಧಿಯಂತಹವರು ಅತ್ಯಂತ ಅಪೂರ್ವ ವೆನ್ನಲು ಸಂದೇಹವಿಲ್ಲ. ರಾಮನು ಕಳ್ಳತನ ಮಾಡಿ ದಾಗ ಕ್ಷಮಿಸಿದರೂ ಅವನು ತನ್ನ ದಯಾಗುಣ ವನ್ನು ನಂಬಲಿಲ್ಲವೆಂದೂ, ಆದುದರಿಂದಲೇ ಹೊರಟು ಹೋದನೆಂದೂ ದಯಾನಿಧಿ ಅನುಮಾನಿಸಿಕೊಂಡೇ ಇದ್ದನು. ಆದರೆ ಅವನು ಅವನ ಮಗನನ್ನು ತನ್ನ ಮನೆಗೇ ಕಳವು ಮಾಡಲು ಕಳುಹಿಸಿ, ತನ್ನ ದಯಾ ಗುಣವನ್ನು ಮೆಚ್ಚಿಕೊಂಡಂತೆ ತೋರಿಸಿದ್ದಾನೆ. ಅದ ರಿಂದ ಅವನಲ್ಲಿದ್ದ ಅನುಮಾನ ತೊಲಗಿ ಹೋಯಿತು. ಆದುದರಿಂದ ತನ್ನ ಮೇಲೆ ಅಷ್ಟು ನಂಬುಗೆ ಇಟ್ಟಿ ರುವ ರಾಮನ ಮೇಲೆ ಅವನ ಮನಸ್ಸು ಉದಾತ್ತ ವಾಗಿ, ಅವನ ಮಗನಿಗೆ ಸಹಕರಿಸಲು ನಿಶ್ಚಯಿ ಸಿದನು. ಅದು ಕೇವಲ ಮುಗ್ಧ ಭಾವನೆಯಲ್ಲ. ಒಳ್ಳೆಯ ಮನಸ್ಸಿನ ಮನುಷ್ಯನು ಇತರರ ಮೆಚ್ಚುಗೆ ಯನ್ನು ಆಶಿಸಲಾರನು. ಆದರೆ ಆ ಒಳ್ಳೆಯ ತನ ವನ್ನು ಇತರರು ಗುರುತಿಸಿಕೊಂಡಾಗ ಅವನಿಗೆ ಸಂತೋಷವಾಗುತ್ತದೆ. ದಯಾನಿಧಿಯ ಪ್ರವರ್ತನೆಗೆ ಇದೇ ಮುಖ್ಯ ಕಾರಣ."

ಹೀಗೆ ರಾಜನಿಗೆ ಮೌನ ಭಂಗವಾದ ಕೂಡಲೇ ಬೇತಾಳವು ಶವ ಸಹಿತ ಮಾಯವಾಗಿ ಹೋಗಿ ಮರದ ಕೊಂಬೆ ಹಿಡಿದು ನೇತಾಡತೊಡಗಿತು.



# ಗಟ್ಟಿಗತನ

ಸೀತಾಪುರದ ಜಮೀನ್ದಾರನು ತನ್ನ ಮಾವಿನ ತೋಟದಲ್ಲಿ ಒಂದು ವಿಶ್ರಾಂತಿ ಭವನ ಕಟ್ಟಿಸಿದನು. ಕಡೆಗೆ ಗೋಡೆಗೆ ಬಣ್ಣ ಹಚ್ಚಲು ತಕ್ಕ ಆಳು ಬೇಕಾಯಿತು. ಜಮೀನ್ದಾರನ ಸ್ವಭಾವ ಗೊತ್ತಿದ್ದವರಾರೂ ಆ ಕೆಲಸಕ್ಕೆ ಮುಂದೆ ಬರಲಿಲ್ಲ. ಯಾವ ಕೆಲಸವಾದರೂ ಆತನಿಗೆ ಹಿಡಿಸುವಂತೆ ಮಾಡುವುದು ಬಹಳ ಕಷ್ಟ.

ಆ ಊರಿಗೆ ಏನೋ ಕೆಲಸದ ಮೇಲೆ ಬಂದ ಸೋಮನಾಥನೆಂಬವನು, ಜಮೀನ್ದಾರನ ಬಳಿಗೆ ಬಂದು, "ಅಯ್ಯಾ, ನಾನು ಈ ಊರಲ್ಲಿ ಎಂಟು ದಿನ ಇರಬೇಕಾಗಿ ಬಂದಿದೆ. ತಮ್ಮ ವಿಶ್ರಾಂತಿ ಭವನದ ಗೋಡೆಗೆ ಬಣ್ಣ ಹಚ್ಚುವ ಕೆಲಸ ನನಗೆ ಒಪ್ಪಿಸಿದರೆ ಚೆನ್ನಾಗಿ ಮಾಡುತ್ತೇನೆ" ಎಂದನು.

"ಸರಿ, ನಾನು ಹೇಳಿದ ಹಾಗೆ ನೀನು ಕೆಲಸ ಮಾಡದೇ ಹೋದ ಪಕ್ಷಕ್ಕೆ ನಿನಗೊಂದು ಕಾಸು ಕೂಡಾ ಕೊಡಲಾರೆ. ನನಗೆ ತೃಪ್ತಿಯಾದರೆ ಮಾತ್ರ ಹಣ ಕೊಡುತ್ತೇನೆ" ಎಂದನು ಜಮೀನ್ದಾರ.

ಸೋಮನಾಥನು ಒಪ್ಪಿದನು. ಜಮೀನ್ದಾರನು ಒಂದು ಚಿಕ್ಕ ಮರದ ಪೆಟ್ಟಿಗೆಯನ್ನು ತಂದು ಅವನಿಗೆ ಕೊಡುತ್ತ, "ಭವನದ ಒಳ ಭಾಗದ ಗೋಡೆಗಳಿಗೆ ಈ ಮರದ ಪೆಟ್ಟಿಗೆ ಯಾವ ಬಣ್ಣದಲ್ಲಿದೆಯೋ ಅಚ್ಚ ಅದೇ ಬಣ್ಣ ಬಳಿಯಬೇಕು" ಎಂದನು. ಸೋಮನಾಥನು ಎಂಟು ದಿನಗಳೊಳಗೆ ಕೆಲಸ ಪೂರ್ತಿ ಮಾಡಿದನು. ಜಮೀನ್ದಾರನು ಮರದ ಪೆಟ್ಟಿಗೆಯನ್ನು ಪ್ರತಿ ಗೋಡೆಯ ಹತ್ತಿರವೂ ಒಯ್ದು, ಬಣ್ಣದ ಹೋಲಿಕೆ ನೋಡಿ ಸಂತೃಪ್ತನಾಗಿ ಸೋಮನಾಥನಿಗೆ ಹಣ ಕೊಟ್ಟನು.

ಮತ್ತೊಂದು ವಾರ ಕಳೆದ ಮೇಲೆ ಜಮೀನ್ದಾರನು ಹೆಂಡತಿಯೊಂದಿಗೆ ವಿಶ್ರಾಂತಿ ಭವನಕ್ಕೆ ಹೋಗಿ ಸೋಮನಾಥನ ಗಟ್ಟಿಗತನವನ್ನು ಮೆಚ್ಚಿಕೊಳ್ಳುತ್ತ, "ಅವನು ಬಣ್ಣ ಕಲೆಸುವುದರಲ್ಲಿ ಬಲು ಗಟ್ಟಿಗ. ನಾನು ಕೊಟ್ಟ ಮರದ ಪೆಟ್ಟಿಗೆಯ ಬಣ್ಣವೇ ಗೋಡೆಗೆ ಬರುವ ಹಾಗೆ ಮಾಡಿದ್ದಾನೆ. ಅವನಿಗೆ ನಮ್ಮ ದಿವಾನದೊಳಗೆ ಉದ್ಯೋಗ ಕೊಟ್ಟರೆ ಇಲ್ಲೇ ಇದ್ದಾನು" ಎಂದನು.

ಜಮೀನ್ದಾರನ ಹೆಂಡತಿಗೆ ಏನೋ ಅನುಮಾನವು ಬಂದು, ಆ ಮರದ ಪೆಟ್ಟಿಗೆಯನ್ನು ಉಗುರಿನಿಂದ ಕೆರೆದು ನೋಡಿದಳು. ಹೊಸದಾಗಿ ಅದಕ್ಕೆ ಹಚ್ಚಿದ ಬಣ್ಣ ಎದ್ದು ಬಂದಿತು. ಅವಳು ಕಿಟಕಿಟನೆ ನಗುತ್ತ, "ಅವನು ನೀವು ಹೇಳಿದ ಹಾಗೆ ಈ ಪೆಟ್ಟಿಗೆಯ ಬಣ್ಣ ಗೋಡೆಗೆ ಹಚ್ಚಿದ್ದಲ್ಲ. ಗೋಡೆಗೆ ಹಚ್ಚಿದ ಬಣ್ಣ ಈ ಮರದ ಪೆಟ್ಟಿಗೆಗೆ ಹಚ್ಚಿದ್ದಾನೆ!" ಎಂದಳು.

ನಡೆದ ಮೋಸಕ್ಕೆ ಕೋಪ ಬಂದರೂ ಜಮೀನ್ದಾರನು ಸೋಮನಾಥನ ಬುದ್ಧಿವಂತಿಕೆಗೆ ನಗಾಡದಿರಲು ಸಾಧ್ಯವಾಗಲಿಲ್ಲ.





# ಚಿಂತೆಯ ಕಾರಣ

ಸ್ವರ್ಣಪುರಿಯ ರಾಜಕುಮಾರಿಯಾದ ಸುಮಲತಾ ದೇವಿ ಚಿಕ್ಕಂದಿನಿಂದಲೇ ಚಿತ್ರ ಕಲೆಯ ಮೇಲೆ ಬಹಳ ಆಸಕ್ತಿ ತೋರಿಸಿಕೊಂಡಿದ್ದಳು. ಅದನ್ನು ಗಮನಿಸಿದ ಮಹಾರಾಜ ಮನೋಹರಸಿಂಹನು, ಬಹು ದೊಡ್ಡ ಚಿತ್ರಕಾರನಾಗಿರುವ ದ್ಯೋತಕನನ್ನು ಕರೆಯಿಸಿ, ಮಗಳಿಗೆ ಚಿತ್ರಕಲೆಯ ಅಭ್ಯಾಸವನ್ನು ಕಲಿಸುವ ಏರ್ಪಾಡು ಮಾಡಿದನು. ಅವನು ಅವಳಿಗೆ ಚಿತ್ರಾಭ್ಯಾಸದೊಂದಿಗೆ, ಚಿತ್ರಕಲೆಗೆ ಬೇಕಾದ ಸೂಕ್ಷ್ಮತೆಯ ಮಿಶ್ರಣಗಳನ್ನೂ, ರೇಖೆಗಳನ್ನೂ, ಮನಸ್ಸಿನಲ್ಲಿ ರೂಪಿಸಿಕೊಳ್ಳಬೇಕಾದ ಬಗೆಯನ್ನೂ ಕಲಿಸಿದನು. ಸುಮಲತಾ ದೇವಿ ಅತ್ಯಾಸಕ್ತಿಯಿಂದ ಕಲಿತು ಬಹು ಬೇಗದಲ್ಲೇ ಚಿತ್ರಕಲೆಯಲ್ಲಿ ಜಾಣೆಯಾದಳು.

ಒಂದು ದಿನ ದ್ಯೋತಕನು ರಾಜಾ ಮನೋಹರಸಿಂಹನೊಂದಿಗೆ, "ಪ್ರಭೂ, ಕುಮಾರಿಗೆ ಇನ್ನು ನಾನು ಕಲಿಸಿಕೊಡುವಂತಹುದು ಏನೂ ಇಲ್ಲ. ಚಿತ್ರ ಕಲೆಯಲ್ಲಿ ಅವಳು ಸಾಧಿಸಿದ ಪ್ರಾವೀಣ್ಯತೆ ನನ್ನನ್ನೂ ಮಿಂಚುವಂತಿದೆ. ಅದಕ್ಕಾಗಿ ನಾನು ಸಂತೋಷಿಸುತ್ತೇನೆ" ಎಂದನು.

ಮಹಾರಾಜನು ದ್ಯೋತಕನ ಮಾತುಗಳಿಗೆ ಸಂತೋಷಪಟ್ಟು, ಅವನಿಗೆ ಘನ ರೀತಿಯ ಸನ್ಮಾನಗಳನ್ನು ಮಾಡಿ ಗೌರವದಿಂದ ಕಳುಹಿಸಿಕೊಟ್ಟನು.

ಮತ್ತೆ ಕೆಲವು ದಿನಗಳ ಮೇಲೆ ಸುಮಲತಾ ದೇವಿ ಒಂದು ಚಿತ್ರವನ್ನು ಚಿತ್ರಿಸಿದಳು. ಅದರಲ್ಲಿ ಸುಂದರ ಯುವಕನೊಬ್ಬನು, ಸ್ವಚ್ಛವಾದ ಬಿಳೀ ಕುದುರೆಯ ಮೇಲೆ ಕುಳಿತುಕೊಂಡು, ಒಂದು ಕೈಯಲ್ಲಿ ಕಡಿವಾಣವನ್ನೂ, ಇನ್ನೊಂದು ಕೈಯಲ್ಲಿ ಖಡ್ಗವನ್ನೂ ಹಿಡಿದುಕೊಂಡಿದ್ದನು. ದೂರದಲ್ಲಿ ಕಾಡು. ಸಂಜೆಯ ಆಕಾಶ. ಆ ಚಿತ್ರವನ್ನು ಪೂರ್ತಿಗೊಳಿಸಿದ ಮೇಲೆ ಸುಮಲತಾ ದೇವಿಯ ಮುಖದಲ್ಲಿ ಏನೋ ದುಗುಡ ಕವಿಯಿತು. ಅವಳ ಪ್ರವರ್ತನೆಯಲ್ಲಿ ಏನೋ ಜಡಮಾಂದ್ಯ ಕಾಣತೊಡಗಿತು. ಆ ಚಿತ್ರವನ್ನು ನೋಡಿದಾಗಲೆಲ್ಲಾ ಅವಳ ಕಣ್ಣುಗಳು ನೀರಿನಿಂದ ತುಂಬಿಬಿಡುತ್ತಿದ್ದುವು. ರಾಜನೂ ರಾಣಿಯೂ ಎಷ್ಟು ಕೇಳಿದರೂ ಚಿಂತೆಯ ಕಾರಣ ಹೇಳಲಿಲ್ಲ. ಅವಳ ಆರೋಗ್ಯವೂ ದಿನದಿನಕ್ಕೆ ಕ್ಷೀಣಿಸತೊಡಗಿತು.

ಒಂದು ದಿನ ಮಂತ್ರಿ ಅಜಯಶರ್ಮನು ರಾಜನೊಂದಿಗೆ, "ಮಹಾರಾಜಾ, ರಾಜಕುಮಾರಿ ಬರೆದ

ಕಮಲಿನಿ



ಮಹಾರಾಜನ ಬಳಿಗೆ ಏಕಾಂತವಾಗಿ ಬಂದು, "ಮಹಾಪ್ರಭುಗಳೇ, ತಾವು ಕ್ಷಮಿಸುವುದಾದರೆ ಒಂದು ವಿಷಯ ಹೇಳೋಣವೆಂದು ಬಂದಿದ್ದೇನೆ. ಆ ಚಿತ್ರದಲ್ಲಿರುವ ಯುವಕನನ್ನು ರಾಜಕುಮಾರಿ ಎಲ್ಲಿಯೋ ನೋಡಿರಬಹುದು. ಆತನನ್ನು ವಿವಾಹ ಮಾಡಿಕೊಳ್ಳಬೇಕೆಂದು ನೆನೆಯುತ್ತಿದ್ದಾಳೆಂದು ಕಾಣುತ್ತದೆ. ತಮ್ಮೊಡನೆ ಹೇಳಲು ಸಂಕೋಚವೋ ಏನೋ? ನಾನೂ ಎಷ್ಟೋ ಕೇಳಿ ನೋಡಿದೆ. ಕೋಪಿಸುತ್ತಾಳೆ" ಎಂದಳು.

ಮಹಾರಾಜನಿಗೆ ಇಂದುಲೇಖೆ ಹೇಳಿದುದು ನಿಜವೇನೋ ಎಂಬ ಅನುಮಾನ ಬಂತು. ಅವನು ಮಹಾರಾಣಿಯೊಂದಿಗೆ ಮಾತಾಡಿ, ಅವಳೊಂದಿಗೆ ಸುಮಲತಾ ದೇವಿಯ ಬಳಿಗೆ ಹೋಗಿ, "ನೀನು ಬರೆದ ಚಿತ್ರದಲ್ಲಿಯ ಯುವಕನನ್ನು ಎಲ್ಲಿಯಾದರೂ ನೋಡಿರುವೆಯಾ? ಒಂದು ವೇಳೆ ಅವನನ್ನೇ ವಿವಾಹ ಮಾಡಿಕೊಳ್ಳಬೇಕೆಂದು ಆಶೆಪಡುವಿಯಾ? ಸಂಕೋಚಪಡದೆ ಹೇಳಮ್ಮ. ಅವನು ಎಲ್ಲಿದ್ದರೂ ಹುಡುಕಿಸುತ್ತೇನೆ" ಎಂದನು.

ಆ ಮಾತು ಕೇಳಿ ಸುಮಲತಾ ದೇವಿ ಬಹು ಕೋಪದಿಂದ, "ಅಪ್ಪಾ, ನೀವು ಕೇವಲ ಅಸಂದರ್ಭದ ಮಾತು ಹೇಳುವಿರಿ" ಎಂದು ದಿಂಬಿನೊಳಗೆ ಮುಖ ತೂರಿಸಿ ಬಿಕ್ಕಿ ಬಿಕ್ಕಿ ಅಳತೊಡಗಿದಳು.

ಮಹಾರಾಜನಿಗೆ ಏನು ಮಾಡಬೇಕೆಂದು ಗೊತ್ತಾಗಲಿಲ್ಲ. ಅವನು ಸಾಯಂಕಾಲದಲ್ಲಿ ಯೋಚಿಸುತ್ತಾ ಉದ್ಯಾನವನಕ್ಕೆ ಹೋಗಿ, ಮಂತ್ರಿಯನ್ನು ಕರೆಯಿಸಿ ಕುಮಾರಿ ಹೇಳಿದ ಮಾತು ಅವನೊಂದಿಗೆ ಹೇಳಿದನು.

ಮಂತ್ರಿ ಅಜಯಶರ್ಮನು ಸ್ವಲ್ಪ ಹೊತ್ತು ಆಲೋಚಿಸಿ, "ಮಹಾರಾಜಾ, ನಾವು ಒಂದು ಕೆಲಸ ಮಾಡುವುದು ಒಳ್ಳೆಯದು. ರಾಜಕುಮಾರಿಯ ಚಿಂತೆಗೆ ಕಾರಣವನ್ನು ತಿಳಿದುಕೊಂಡು ಅವಳನ್ನು ಸಂತೋಷಪಡಿಸುವವನಿಗೆ ಒಂದು ರಾಜ್ಯವನ್ನು

ಚಿತ್ರದಲ್ಲಿ ಅವಳಿಗೇನೋ ಲೋಪವು ಕಾಣುತ್ತಿರಬೇಕೆಂದು ನನ್ನ ಅನುಮಾನ. ನಾವು ಒಂದು ಸಾರಿ ದ್ಯೋತಕನನ್ನು ಕರೆದು, ಅದೇನು ಸಂಗತಿ ಎಂದು ಪರಿಶೀಲಿಸಿ ನೋಡಲು ಹೇಳಿದರೆ, ಏನಾದರೂ ಪ್ರಯೋಜನವಿರಬಹುದು" ಎಂದನು.

ಮಹಾರಾಜನು ದ್ಯೋತಕನನ್ನು ಕರೆಯಿಸಿ ತನ್ನ ಮಗಳು ಬರೆದ ಚಿತ್ರವನ್ನು ಪರೀಕ್ಷಿಸಲು ಕೇಳಿಕೊಂಡನು. ಅವನು ಒಂದು ದಿನವಿಡೀ ಆ ಚಿತ್ರವನ್ನು ಸೂಕ್ಷ್ಮಾತಿಸೂಕ್ಷ್ಮವಾಗಿ ಪರೀಕ್ಷಿಸಿ "ಪ್ರಭೂ! ಚಿತ್ರದಲ್ಲಿ ಯಾವ ಲೋಪವೂ ಇಲ್ಲ. ಇಂತಹ ಚಿತ್ರವನ್ನು ಚಿತ್ರಿಸಲು ಇನ್ನೊಬ್ಬರಿಗೆ ಸಾಧ್ಯವಾಗದು. ಚಿತ್ರದಲ್ಲಿ ಲೋಪವಿಲ್ಲವೆಂದು ರಾಜಕುಮಾರಿಯೊಂದಿಗೆ ಒತ್ತೊತ್ತಿ ಹೇಳಿದರೂ ಚಿಂತೆಹೋದಂತೆ ಕಾಣಲಿಲ್ಲ. ಕ್ಷಮಿಸಬೇಕು" ಎಂದನು.

ದ್ಯೋತಕನು ಹೊರಟುಹೋದ ಮೇಲೆ ಒಂದು ದಿನ ಸುಮಲತಾ ದೇವಿಯ ಇಷ್ಟಸಖಿ ಇಂದುಲೇಖೆ

ಬಹುಮಾನ ಕೊಡುವೆವೆಂದು ಪ್ರಕಟಿಸೋಣ. ಅದರಿಂದ ಏನಾದರೂ ಪ್ರಯೋಜನವಾಗಬಹುದು" ಎಂದು ಸಲಹೆ ಮಾಡಿದನು.

ಅದು ಒಳ್ಳೆಯದೆಂದು ರಾಜನಿಗೂ ತೋರಿದುದರಿಂದ, ಹಾಗೆಯೇ ದೇಶದೊಳಗೆಲ್ಲಾ ಡಂಗುರ ಸಾರಿಸಲಾಯಿತು. ಅದನ್ನು ಕೇಳಿ ಎಷ್ಟೋ ಮಂದಿ ಚಿತ್ರಕಾರರೂ, ಮೇಧಾವಿಗಳೂ ಬಂದು, ರಾಜಕುಮಾರಿಯ ಚಿಂತೆಗೆ ಕಾರಣವೇನೆಂದು ತಿಳಿಯಲು ಪ್ರಯತ್ನಮಾಡಿ, ವಿಫಲರಾಗಿ ಹೊರಟುಹೋದರು.

ಎಲ್ಲೆಲ್ಲಿಂದ ಬಂದ ಎಂತೆಂತಹವರೋ ಮುಖ ತಗ್ಗಿಸಿಕೊಂಡು ಹೋಗುವುದನ್ನು ನೋಡಿ, ರಾಜನಿಗೆ ಏನೂ ತೋರದೆ ದಿಗಿಲು ಹಿಡಿಯಿತು. ಹಾಗಿರುವಾಗ ಸುಕೇತನೆಂಬೊಬ್ಬನು ರಾಜನ ಬಳಿಗೆ ಬಂದು, "ಮಹಾಪ್ರಭೂ, ರಾಜಕುಮಾರಿ ಬರೆದ ಚಿತ್ರವನ್ನು ಒಂದು ಸಾರಿ ನಾನು ನೋಡುವ ಹಾಗೆ ಮಾಡಿದರೆ, ಅವಳ ಚಿಂತೆಯ ಕಾರಣ ತಿಳಿಯಬಹುದೆಂಬ ನಂಬುಗೆ ನನಗಿದೆ" ಎಂದನು.

ಆ ಮಾತು ಕೇಳಿ ರಾಜನು ರೇಗಿಕೊಂಡು, "ಅವಳ ಚಿತ್ರದಲ್ಲಿ ಯಾವ ಲೋಪವೂ ಇಲ್ಲವೆಂದು ಚಿತ್ರಕಾರರ ಗುರುವಿಗೇ ಗುರುವಾದ ದ್ಯೋತಕನು ಎಂದೋ ಹೇಳಿ ಹೋಗಿದ್ದಾನೆ. ಹಾಗಿರುವಾಗ ನಿನ್ನ ಯೋಗ್ಯತೆ ಎಂತಹುದು?" ಎಂದನು.

"ಪ್ರಭುಗಳು ಕೋಪಿಸಬಾರದು. ನನ್ನ ಯೋಗ್ಯತೆಯನ್ನು ಹೇಳುವುದಾದರೆ ನಾನು ಈ ಮೊದಲೇ ಹೇಳಿದಂತೆ, ರಾಜಕುಮಾರಿಯನ್ನು ದೊಡ್ಡ ಚಿತ್ರಕಾರರೂ, ಮಹಾ ಮೇಧಾವಿಗಳೂ ಸಂದರ್ಶಿಸಿ ಹೋಗಿದ್ದಾರೆ. ಆದರೂ ಅವಳ ಚಿಂತೆ ಇದ್ದಹಾಗೇ ಇದೆಯಷ್ಟೆ? ಈ ಸಂದರ್ಭದಲ್ಲಿ ನನ್ನ ಯೋಗ್ಯತೆಯ ವಿಷಯ ಮುಖ್ಯವಲ್ಲವೆಂದು ಕಾಣುತ್ತದೆ. ಇಲ್ಲಿ ಅಗತ್ಯವಾದುದು ಮನೋಧರ್ಮವನ್ನು ತೂಗಿ ನೋಡುವಂತಹ ಲೋಕಜ್ಞಾನ.



ಯೋಗ್ಯತೆ ಹೇಳುವುದಾದರೆ ನಾನು ಅನೇಕ ರಾಜಾಸ್ಥಾನಗಳಲ್ಲಿ, ನಾಟ್ಯಾಚಾರ್ಯನಾಗಿಯೂ, ಚಿತ್ರಕಲೆ, ಸಂಗೀತ ಸಾಹಿತ್ಯಗಳಲ್ಲಿ ಶಿಕ್ಷಕನಾಗಿಯೂ ಕೆಲಸ ಮಾಡಿದ್ದೇನೆ" ಎಂದನು.

ಅವನು ಹೇಳಿದುದನ್ನು ಕೇಳಿ ಮಂತ್ರಿ, "ಮಹಾರಾಜಾ, ಇವನಿಗೂ ಒಂದು ಅವಕಾಶ ಕೊಟ್ಟು ನೋಡೋಣ" ಎಂದನು.

ಮಹಾರಾಜನು ಸರಿ ಎಂದಮೇಲೆ, ಸುಕೇತನು ರಾಜಕುಮಾರಿ ಬರೆದ ಅಶ್ವಾರೋಹಿಯ ಚಿತ್ರವನ್ನು ಪರೀಕ್ಷಿಸಿ, ಅವಳನ್ನು ನೋಡಿ, "ಹೌದಮ್ಮಾ ರಾಜಕುಮಾರೀ, ನೀವು ಬರೆದಂತಹ ಈ ಚಿತ್ರವನ್ನು ಮೀರಿಸುವಂತಹ ಇನ್ನೊಬ್ಬರಿಲ್ಲ, ನಿಮಗೇ ಇನ್ನೊಂದು ಚಿತ್ರವನ್ನು ಬರೆಯಲು ಸಾಧ್ಯವಿಲ್ಲ. ಅದೇ ನಿಮ್ಮ ಚಿಂತೆಗೆ ಕಾರಣ. ಆದರೆ ಸಾಧ್ಯವಾಗದುದನ್ನು ಕುರಿತು ಚಿಂತಿಸುವುದರಿಂದ ಲಾಭವೇನೂ ಇಲ್ಲವಷ್ಟೆ?" ಎಂದನು.

ಸುಮಲತಾ ದೇವಿ ಸುಕೇತನನ್ನು ಕೌತುಕದಿಂದ ನೋಡುತ್ತ, ಏನೋ ಹೇಳಬೇಕೆಂದಿರಲು, ಮಹಾರಾಜನು, "ನಾನು ನಿನ್ನ ಹತ್ತಿರ ಕುಮಾರಿಯ ಚಿಂತೆಗೆ ಕಾರಣವೇನೆಂದು ತಿಳಿಯಲಿಕ್ಕೆ ಹೇಳಿದರೆ, ನೀನು ಅವಳ ಚಿತ್ರಕಲೆಯ ಪ್ರಶ್ನೆಯನ್ನು ಹೇಳುವೆಯಾ ? ಅದನ್ನು ಯಾರು ಕೇಳಿದರು ? " ಎಂದನು.

"ಕೋಪಿಸಬೇಡಿ ಮಹಾಪ್ರಭೂ. ನಾನು ಈಗ ತಿಳಿದುಕೊಂಡುದು ನಿಮ್ಮ ಕುಮಾರಿಯ ಚಿಂತೆಗೆ ಇರುವ ಮೂಲ ಕಾರಣವನ್ನೇ. ಮನುಷ್ಯನು ತಾನು ಆಶಿಸಿದುದನ್ನು ಸಾಧಿಸಿದಾಗ ಮಾತ್ರವೇ ನಿಶ್ಚಿಂತನಾಗಿಬಿಡುವುದಿಲ್ಲ. ಇನ್ನು ತಾನು ಸಾಧಿಸಬೇಕಾದುದೇನೂ ಇಲ್ಲವೆಂದು ತಿಳಿದಾಗಲೂ ಚಿಂತೆಗೆ ಬೀಳುತ್ತಾನೆ. ನಿಮ್ಮ ಕುಮಾರಿಯ ವಿಷಯದಲ್ಲಿಯೂ ಹೀಗೆಯೇ ನಡೆದಿದೆ. ಚಿಕ್ಕಂದಿನಿಂದಲೂ ಇವಳಿಗೆ ಲಲಿತ ಕಲೆಗಳಲ್ಲಿ ಆಸಕ್ತಿ ಜಾಸ್ತಿ. ಅದರ ಒಂದು ಅಂಗವಾದ ಚಿತ್ರಕಲೆಯಲ್ಲಿ ಇವಳು ಪಾರೀಣಳಾಗಿದ್ದಾಳೆ. ಇನ್ನು ಸಂಗೀತ ನಾಟ್ಯ ಕಲೆಗಳನ್ನು ಅಭ್ಯಾಸ ಮಾಡುವ ಪ್ರಯತ್ನ ಮಾಡಿದರೆ ಚಿಂತೆಯನ್ನು ಮರೆಯುವುದರಲ್ಲಿ ಸಂದೇಹವಿಲ್ಲ" ಎಂದನು ಸುಕೇತ.

ಸುಕೇತನು ಹೀಗೆ ಹೇಳಿದ ಕೂಡಲೇ ಮಹಾರಾಜನು ತನ್ನ ಮಗಳ ಕಡೆಗೆ ನೋಡಿದನು. ಸುಮಲತಾ ದೇವಿ ಮಂದಹಾಸದ ಮುಖದಿಂದ, "ಅಪ್ಪಾ, ಇವರು ಹೇಳಿದ್ದು ನಿಜವೇ. ಈ ಅಶ್ವಾರೋಹಿಯ ಚಿತ್ರದಲ್ಲಿ ನನ್ನ ಕೌಶಲವೆಲ್ಲವನ್ನೂ ತೋರಿಸಿ ರಚಿಸಿದ್ದೇನೆ. ಇದನ್ನು ಮೀರಿಸುವಂತಹ ಇನ್ನೊಂದು ಚಿತ್ರ ಬರೆಯಲು ಸಾಧ್ಯವಿಲ್ಲ. ಬೇರೆ ಕಲೆಗಳನ್ನು ಕಲಿಯಲು ಈವರೆಗೂ ಮನಸ್ಸು ಮಾಡಿರಲಿಲ್ಲ. ಕಲಿತರೆ ಬರುತ್ತೋ ಇಲ್ಲವೋ, ನೀವು ಒಪ್ಪುವಿರೋ ಇಲ್ಲವೋ, ಮದುವೆಯಾಗಿ ಹೋಗುವವಳಿಗೆ ಅದೆಲ್ಲ ಯಾಕೆಂದು ಹೇಳುವಿರೋ ಏನೋ ಎಂಬ ಶಂಕೆಗಳಿಂದ, ಹೇಗೆ ಹೊತ್ತು ಕಳೆಯುವುದೆಂದು ತಿಳಿಯದೆ ಚಿಂತೆಗೆ ಬಿದ್ದೆನು. ಇವರಿಂದ ಅದೆಲ್ಲ ಪರಿಹಾರವಾಯಿತು. ನಾನು ನಾಟ್ಯವನ್ನೂ, ಸಂಗೀತವನ್ನೂ ಕಲಿಯುತ್ತೇನೆ. ಇವರೇ ನನಗೆ ಮಾರ್ಗದರ್ಶಕರು" ಎಂದು ಹೇಳಿ ಸುಕೇತನ ಪಾದಗಳಿಗೆ ನಮಸ್ಕಾರ ಮಾಡಿದಳು.

ಮಹಾರಾಜನು ಆತ್ಮಾನಂದದಿಂದ ಸುಕೇತನನ್ನು ನೋಡಿ, "ಆಚಾರ್ಯಾ, ನೀವೇ ನನ್ನ ಕುಮಾರಿಗೆ ಗುರುಗಳಾಗಿರಬೇಕು. ಹೇಳಿದ ಪ್ರಕಾರ ನಿಮಗೊಂದು ರಾಜ್ಯವನ್ನು ಕೊಡುತ್ತೇನೆ". ಎಂದನು.

ಸುಕೇತನು ಮುಗುಳುನಗುತ್ತ "ಮಹಾರಾಜರೇ, ನನಗೆ ರಾಜ್ಯವೇಕೆ ? ನಾನು ತಮ್ಮ ಆಸ್ಥಾನದಲ್ಲಿಯೇ ಇದ್ದು ನಿಮ್ಮ ಕುಮಾರಿಗೆ ನನ್ನ ಕೈಲಾದ ರೀತಿಯಲ್ಲಿ ಸಂಗೀತ ನಾಟ್ಯಗಳನ್ನು ಕಲಿಸುತ್ತೇನೆ" ಎಂದನು.





ಅನೇಕಾನೇಕ ವರ್ಷಗಳ ಹಿಂದೆ ಕಾಶೀರಾಜನ ಪಟ್ಟದ ರಾಣಿ ಇಬ್ಬರು ಗಂಡು ಮಕ್ಕಳನ್ನು ಹಡೆದಳು. ಅದರಲ್ಲಿ ಒಬ್ಬನ ಹೆಸರು ಮಹಿಂಸಾನನೆಂದು. ಇವನು ಬೋಧಿಸತ್ವನ ಅವತಾರದವನು. ಎರಡನೇ ಮಗನ ಹೆಸರು ಚಂದ್ರಕುಮಾರ. ಇವರಿಬ್ಬರೂ ಚಿಕ್ಕ ವಯಸ್ಸಿನಲ್ಲಿರುವಾಗಲೇ ಪಟ್ಟದ ರಾಣಿ ತೀರಿಹೋಗಿ ಬಿಟ್ಟಳು.

ಆದುದರಿಂದ ರಾಜನು ಮತ್ತೊಬ್ಬಳನ್ನು ಮದುವೆ ಮಾಡಿಕೊಂಡು ಅವಳನ್ನು ಪಟ್ಟದ ರಾಣಿಯಾಗಿ ಮಾಡಿಕೊಂಡನು. ಅವಳು ರಾಜನಿಗೆ ಪ್ರೇಮಪಾತ್ರಳಾಗಿ ಅನುಕೂಲವತಿಯಾಗಿರುತ್ತ, ಕಾಲಕ್ರಮದಲ್ಲಿ ಒಬ್ಬ ಮಗನನ್ನು ಪ್ರಸವಿಸಿದಳು. ಅವಳ ಮಗನಿಗೆ ಸೂರ್ಯಕುಮಾರನೆಂದು ಹೆಸರಿಟ್ಟರು. ರಾಜನು ಅವಳು ಹೆತ್ತ ಮಗನ ಅಂದಚೆಂದಗಳನ್ನು ನೋಡಿ ಬಹಳ ಸಂತೋಷಪಟ್ಟು, ಪಟ್ಟದ ರಾಣಿಯನ್ನು ನೋಡಿ, " ನಿನ್ನ ಮಗನಿಗೆ ಏನಾದರೊಂದು ವರವನ್ನು ಕೇಳು, ಕೊಡುತ್ತೇನೆ " ಎಂದನು.

" ಈಗ ಬೇಡ. ನನಗೆ ಬೇಕೆನಿಸಿದಾಗ ಕೇಳಿ ಪಡೆದುಕೊಳ್ಳುತ್ತೇನೆ " ಎಂದಳು ಪಟ್ಟದ ರಾಣಿ.

ಕಾಲಕ್ರಮದಲ್ಲಿ ಸೂರ್ಯಕುಮಾರನು ಬೆಳೆದು ತಕ್ಕ ಪ್ರಾಯಕ್ಕೆ ಬಂದನು. ಆಗ ಒಂದು ದಿನ ಪಟ್ಟದ ರಾಣಿ ರಾಜನೊಂದಿಗೆ, " ನನ್ನ ಮಗನು ಹುಟ್ಟಿದಾಗ ಅವನಿಗಾಗಿ ಒಂದು ವರ ಕೇಳಲು ಹೇಳಿದಿರಿ. ಬೇಕಾದಾಗ ಕೇಳುವೆನೆಂದಿದ್ದೆ. ಈಗ ಅದಕ್ಕೆ ತಕ್ಕ ಸಮಯ ಬಂದಿರುವುದರಿಂದ ಕೇಳುತ್ತೇನೆ. ನನ್ನ ಮಗನಿಗೆ ರಾಜ್ಯದ ಪಟ್ಟಾಭಿಷೇಕ ಮಾಡಿರಿ. ಅದೇ ಅವನಿಗಾಗಿ ನಾನು ಕೇಳುವ ವರ " ಎಂದಳು.

ಅವಳು ಹೇಳಿದುದನ್ನು ಕೇಳಿ ರಾಜನು ತಬ್ಬಿಬ್ಬಾದನು. ಒಂದು ನಿಮಿಷ ಸುಮ್ಮನಿದ್ದು ಮನಸ್ಸು ಗಟ್ಟಿಮಾಡಿಕೊಂಡನು.

" ಅಗ್ನಿಜ್ವಾಲೆಗಳ ಹಾಗೆ ಪ್ರಕಾಶಿಸುವ ಹಿರಿಯ ಕುಮಾರರು ಇಬ್ಬರಿರುವಾಗ, ಚಿಕ್ಕಮಗನಿಗೆ ರಾಜ್ಯದ ಪಟ್ಟಕಟ್ಟಲು ಸಾಧ್ಯವಿಲ್ಲ " ಎಂದು ಖಂಡಿತವಾಗಿ ಹೇಳಿದನು ರಾಜ.

ಪಟ್ಟದರಾಣಿಯು ಕೋಪತಾಪಗಳನ್ನು ರಾಜನು ಲಕ್ಷ್ಯಮಾಡಲಿಲ್ಲ. ಆದರೆ ಅವಳಿಂದ ತನ್ನ ಹಿರಿಯ ಕುಮಾರರಿಗೆ ಏನಾದರೂ ಕೆಡುಕಾಗುವುದೇನೋ



ಎಂದು ಅವನಿಗೆ ಭಯವಾಯಿತು. ಅಂತಲೇ ರಾಜನು ಮಹಿಂಸಾನನನ್ನೂ, ಚಂದ್ರಕುಮಾರನನ್ನೂ ಗುಟ್ಟಾಗಿ ಕರೆದು, "ಕಂದಗಳಿರಾ, ನಿಮ್ಮ ತಮ್ಮ ಸೂರ್ಯಕುಮಾರನು ಹುಟ್ಟಿದಾಗ, ನಿಮ್ಮ ಚಿಕ್ಕಮ್ಮನಿಗೆ ಒಂದು ವರ ಕೊಡುವೆನೆಂದೆನು. ಅವಳು ಈಗ ಅವನಿಗೆ ರಾಜ್ಯವನ್ನು ಕೊಡಬೇಕೆಂದು ಕೇಳುತ್ತಾಳೆ. ಅದು ಧರ್ಮವಿರುದ್ಧವಾದುದರಿಂದ ಹಾಗೆ ಮಾಡಲು ನನಗೆ ಇಷ್ಟವಿಲ್ಲ. ಅದು ಸಾಧ್ಯವೇ ಇಲ್ಲವೆಂದು ಖಂಡಿತ ಹೇಳಿದ್ದೇನೆ. ಆದರೆ ಸ್ತ್ರೀಬುದ್ಧಿ ಹೇಗೆಲ್ಲಾ ಹರಿಯುವುದೋ ಹೇಳಲಾಗದು. ನೀವಿಬ್ಬರೂ ಅರಣ್ಯಕ್ಕೆ ಹೋಗಿ ನಾನು ಕಣ್ಣು ಮುಚ್ಚಿದ ಮೇಲೆ ಹಿಂದಿರುಗಿ ಬಂದು, ಈ ರಾಜ್ಯವನ್ನು ಆಳಿರಿ" ಎಂದು ಹೇಳಿದನು.

ಇದಾವುದೂ ಸೂರ್ಯಕುಮಾರನಿಗೆ ತಿಳಿಯದು. ತನ್ನ ಅಣ್ಣಂದಿರು ರಾಜಭವನದಿಂದ ಇಳಿದು ಎಲ್ಲಿಗೋ ಪ್ರಯಾಣ ಹೋಗುವುದನ್ನು ನೋಡಿ, ಅವರೊಂದಿಗೆ ತಾನೂ ಹೋಗಿ ಸೇರಿಕೊಂಡನು. ಅವರು ಬೇಡವೆಂದು ತಡೆದರೂ ಅವನು ಕೇಳಲಿಲ್ಲ.

ಮೂವರು ಅಣ್ಣತಮ್ಮಂದಿರೂ ಹೋಗಿ ಹೋಗಿ ಹಿಮಾಲಯ ಪರ್ವತವನ್ನು ತಲುಪಿದರು. ಬೋಧಿಸತ್ವನಾದ ಮಹಿಂಸಾನನು ಒಂದು ಮರದ ಬುಡದಲ್ಲಿ ಕುಳಿತುಕೊಂಡು, ಸೂರ್ಯಕುಮಾರನನ್ನು ನೋಡಿ, "ತಮ್ಮಾ, ಅಲ್ಲಿ ಕಾಣುವ ಕೊಳಕ್ಕೆ ಹೋಗಿ, ಸ್ನಾನ ಮಾಡಿ, ದಾಹ ತೀರಿಸಿಕೊಂಡು, ನಮ್ಮಿಬ್ಬರಿಗೂ ಕುಡಿಯಲು ತಾಮರೆ ದೊನ್ನೆಯಲ್ಲಿ ನೀರು ತೆಗೆದುಕೊಂಡು ಬಾ" ಎಂದನು.

ಆ ಕೊಳವು ಜಲರಾಕ್ಷಸನಾದ ಯಕ್ಷನಿಗೆ ಸೇರಿತ್ತು. ಕುಬೇರನು ಆ ಕೊಳವನ್ನು ಆ ಜಲರಾಕ್ಷಸನಿಗೆ ಕೊಟ್ಟು, ಆ ಕೊಳಕ್ಕೆ ಬಂದವರಿಗೆ ದೇವಧರ್ಮವು ತಿಳಿದಿದ್ದರೆ ಬಿಟ್ಟುಬಿಡಬೇಕೆಂದೂ, ಅದು ತಿಳಿಯದವರನ್ನು ಹಿಡಿದಿಟ್ಟುಕೊಂಡು, ಹಸಿವಾದಾಗ ತಿನ್ನುವಂತೆಯೂ ಹೇಳಿದ್ದನು. ಕೊಳಕ್ಕೆ ಇಳಿಯದವರ ತಂಟೆಗೆ ಹೋಗಬಾರದೆಂದೂ ಶಾಸಿಸಿದ್ದನು.

ಅಂದಿನಿಂದ ಆ ಯಕ್ಷಜಲರಾಕ್ಷಸನು ಕೊಳದಲ್ಲಿ ಇಳಿಯುವ ಪ್ರತಿಯೊಬ್ಬನನ್ನೂ "ದೇವಧರ್ಮ ಎಂದರೆ ಏನು?" ಎಂದು ಕೇಳುವನು. ಹೇಳದವರನ್ನು ಹಿಡಿದುಕೊಂಡು ಹೋಗಿ ಮರುದಿನ ತಿಂದು ಬಿಡುತ್ತಿದ್ದನು. ಅದರಂತೆ ಸೂರ್ಯಕುಮಾರನು ಕೊಳಕ್ಕೆ ಕಾಲಿಟ್ಟ ಕೂಡಲೇ ಯಕ್ಷಜಲರಾಕ್ಷಸನು ಅವನನ್ನು ನೋಡಿ, "ನಿನಗೆ ದೇವಧರ್ಮ ಗೊತ್ತಿದೆಯೆ?" ಎಂದು ಕೇಳಿದನು.

"ಗೊತ್ತಿದೆ. ದೇವಧರ್ಮವೆಂದರೆ ಸೂರ್ಯಚಂದ್ರರು" ಎಂದನು ಸೂರ್ಯಕುಮಾರ.

"ನಿನಗೆ ದೇವಧರ್ಮ ಗೊತ್ತಿಲ್ಲ" ಎಂದು ಹೇಳಿ ಯಕ್ಷನು ಸೂರ್ಯಕುಮಾರನನ್ನು ಹಿಡಿದುಕೊಂಡು ಹೋಗಿ ತನ್ನ ಮನೆಯೊಳಗೆ ಬಂಧಿಸಿಟ್ಟನು. ಎಷ್ಟು ಹೊತ್ತಾದರೂ ಸೂರ್ಯಕುಮಾರನು

ಹಿಂದಿರುಗಿ ಬಾರದಿರುವುದನ್ನು ನೋಡಿ ಬೋಧಿಸತ್ವನು ಚಂದ್ರಕುಮಾರನನ್ನು ಕೊಳಕ್ಕೆ ಕಳುಹಿಸಿದನು. ಯಕ್ಷಜಲರಾಕ್ಷಸನು ಅವನನ್ನು ಕೂಡಾ "ದೇವಧರ್ಮವೆಂದರೇನು ?" ಎಂದು ಪ್ರಶ್ನಿಸಿದನು. "ದೇವಧರ್ಮವೆಂದರೆ ನಾಲ್ಕು ದಿಕ್ಕುಗಳು ಎಂದರ್ಥ" ಎಂದನು ಚಂದ್ರಕುಮಾರ. "ಅಲ್ಲ. ನಿನಗೆ ದೇವಧರ್ಮ ತಿಳಿಯದು" ಎಂದು ಹೇಳಿ ಯಕ್ಷಜಲರಾಕ್ಷಸನು ಅವನನ್ನು ಕೂಡಾ ಹಿಡಿದುಕೊಂಡು ಹೋಗಿ ತನ್ನ ಮನೆಯಲ್ಲಿ ಬಂಧಿಸಿಟ್ಟನು.

ಚಂದ್ರಕುಮಾರನು ಕೂಡಾ ಎಷ್ಟು ಹೊತ್ತಾದರೂ ಹಿಂದಿರುಗಿ ಬಾರದುದನ್ನು ನೋಡಿ, ಏನೋ ವಿಪತ್ತು ಸಂಭವಿಸಿರಬೇಕೆಂದು ಶಂಕಿಸಿ ಬೋಧಿಸತ್ವನು, ತಾನೇ ಹೊರಟು ಕೊಳದ ಹತ್ತಿರ ಹೋದನು, ಇಬ್ಬರು ಮನುಷ್ಯರು ಕೊಳದ ನೀರಿಗೆ ಇಳಿದ ಹೆಜ್ಜೆಯ ಗುರುತುಗಳು ಕಾಣುತ್ತವೆಯೇ ಹೊರತು, ಅವರು ಅಲ್ಲಿಂದ ಹಿಂದಿರುಗಿದ ಗುರುತುಗಳು ಇರಲಿಲ್ಲ. "ಕೊಳದಲ್ಲಿ ಯಾವ ರಾಕ್ಷಸನೋ ಅಡಗಿಕೊಂಡಿರಬಹುದು" ಎಂದುಕೊಂಡು ಬೋಧಿಸತ್ವನು ಒರೆಯಿಂದ ಕತ್ತಿಯನ್ನು ಸೆಳೆದು ಕೈಯ್ಯಲ್ಲಿ ಹಿಡಿದುಕೊಂಡು ಯುದ್ಧಕ್ಕೆ ಸಿದ್ಧನಾಗಿ ನಿಂತನು.

ಅವನು ನೀರಿಗೆ ಇಳಿಯದೆ ಹಾಗೆ ನಿಂತುದನ್ನು ನೋಡಿ, ಯಕ್ಷಜಲರಾಕ್ಷಸನು ಬೇಡನ ರೂಪತಾಳಿ ಅವನ ಇದಿರಿಗೆ ಬಂದು,

"ಮಹಾನುಭಾವರೇ, ಇಲ್ಲಿಯವರೆಗೆ ಬಂದು ನೀರಿಗಿಳಿದು ಸ್ನಾನಮಾಡದೆ ನೀರು ಕುಡಿಯದೆ ಹೀಗೆ ಸುಮ್ಮನೆ ನಿಂತಿರುವಿರೇಕೆ ?" ಎಂದು ಕೇಳಿದನು.

ಬಹುಶಃ ಇವನೇ ಈ ಕೊಳದ ರಹಸ್ಯಕ್ಕೆ ಸಂಬಂಧಿಸಿದವನಿರಬೇಕೆಂದು ಊಹಿಸಿ ಬೋಧಿಸತ್ವನು "ನನ್ನ ತಮ್ಮಂದಿರನ್ನು ಹಿಡಿದುಕೊಂಡು ಹೋದವನು ನೀನೇ ಏನು ?" ಎಂದು ಕೇಳಿದನು.



"ಹೌದು. ಅವರನ್ನು ಹಿಡಿದುಕೊಂಡು ಹೋದವನು ನಾನೇ. ಅವರ ಅಣ್ಣನೋ ನೀವು ?" ಎಂದನು ಯಕ್ಷಜಲರಾಕ್ಷಸ.

"ಕೊಳಕ್ಕೆ ಇಳಿದವರನ್ನೆಲ್ಲಾ ನೀನೇನು ಮಾಡುವೆ?" ಎಂದು ಕೇಳಿದನು ಬೋಧಿಸತ್ವ. "ದೇವಧರ್ಮ ತಿಳಿಯದವರನ್ನು ಮಾತ್ರ ತಿಂದು ಹೊಟ್ಟೆ ತುಂಬಿಸಿಕೊಳ್ಳುವುದು ನನ್ನ ಪದ್ಧತಿ. ನಿಮ್ಮ ತಮ್ಮಂದಿರು ದೇವಧರ್ಮ ತಿಳಿಯದೆ ಸಿಕ್ಕಿಬಿದ್ದರು. ನಾಳೆಯಿಂದ ಅವರು ನನಗೆ ಆಹಾರವಾಗುತ್ತಾರೆ" ಎಂದನು ಯಕ್ಷಜಲರಾಕ್ಷಸ.

"ನಿನಗೆ ದೇವಧರ್ಮ ಬೇಕಾದರೆ ನಾನು ತಿಳಿಸುತ್ತೇನೆ. ಆಮೇಲೆ ನೀರು ಕುಡಿಯಬಹುದಷ್ಟೆ ?" ಎಂದು ಕೇಳಿದನು ಬೋಧಿಸತ್ವ.

"ಧಾರಾಳವಾಗಿ ದೇವಧರ್ಮ ಹೇಳಿರಿ" ಎಂದನು ಯಕ್ಷ. "ಹಾಗಾದರೆ ಲಕ್ಷ್ಯವಿಟ್ಟು ಕೇಳು. ಅಭಿಮಾನವೂ, ನಿಂದೆಯೂ, ಭಯವೂ, ಶುಭ

ಕರ್ಮಗಳೂ, ಶಾಂತತೆಯೂ ತುಂಬಿರುವ ಸತ್ಪುರುಷರು ಆಚರಿಸುವ ಧರ್ಮವೇ ದೇವಧರ್ಮ" ಎಂದನು ಬೋಧಿಸತ್ವ.

ಯಕ್ಷಜಲರಾಕ್ಷಸನು ಆ ಮಾತಿಗೆ ತೃಪ್ತನಾಗಿ, ಬೋಧಿಸತ್ವನನ್ನು ಉಪಚರಿಸಿ, "ನನಗೆ ನಿಮ್ಮ ಮೇಲೆ ತುಂಬಾ ಆದರವೆನಿಸಿದೆ. ನಿಮ್ಮ ತಮ್ಮಂದಿರಲ್ಲಿ ಒಬ್ಬನನ್ನು ನಿಮಗೆ ಕೊಟ್ಟುಬಿಡುತ್ತೇನೆ. ಯಾರನ್ನು ತೆಗೆದುಕೊಳ್ಳುವಿರಿ ?" ಎಂದು ಕೇಳಿದನು.

"ನನ್ನ ಚಿಕ್ಕ ತಮ್ಮ ಸೂರ್ಯಕುಮಾರನನ್ನೇ ತೆಗೆದುಕೊಂಡು ಬಾ" ಎಂದನು ಬೋಧಿಸತ್ವ

"ಪಂಡಿತರೇ, ನಿಮಗೆ ದೇವಧರ್ಮ ಗೊತ್ತಿದೆಯೇ ಹೊರತು ಅದನ್ನು ಅಮಲು ಪಡಿಸುವ ಕ್ರಮವೇ ತಿಳಿಯದು" ಎಂದನು ಯಕ್ಷ.

ಅದೇನೆಂದು ಬೋಧಿಸತ್ವನು ಕೇಳಲು, "ನಿಮ್ಮ ತಮ್ಮಂದಿರಲ್ಲಿ ದೊಡ್ಡವನನ್ನು ಬಿಟ್ಟು ಚಿಕ್ಕವನನ್ನೇ ಕೇಳುವುದರಿಂದ ದೊಡ್ಡವರಿಗೆ ನೀವು ಗೌರವ ಕೊಡುವುದಿಲ್ಲವೆಂದು ಅರ್ಥವಾಗುತ್ತದೆ" ಎಂದನು ಯಕ್ಷಜಲರಾಕ್ಷಸ.

"ಯಕ್ಷಾ, ನಾನು ದೇವಧರ್ಮವನ್ನು ಹೇಳುವುದು ಮಾತ್ರವಲ್ಲ; ಸ್ವತಃ ಆಚರಿಸುವವನು. ಆದುದರಿಂದಲೇ ಹಾಗೆ ಕೇಳಿದೆ. ನನ್ನ ಆ ಚಿಕ್ಕ ತಮ್ಮನ ಕಾರಣದಿಂದಲೇ ನಾವು ಅರಣ್ಯಕ್ಕೆ ಬಂದೆವು. ಬರಬೇಡವೆಂದರೂ ಅವನು ಕೇಳಲಿಲ್ಲ. ಅವನ ತಾಯಿ ಅವನಿಗೇ ರಾಜ್ಯವನ್ನು ಕೇಳಿದ್ದಾಳೆ. ನಮ್ಮ ಕ್ಷೇಮಕ್ಕಾಗಿ ನಮ್ಮ ತಂದೆ ನಮ್ಮನ್ನು ಕಾಡಿಗೆ ಕಳುಹಿಸಿದ್ದಾರೆ. ಸಣ್ಣ ತಮ್ಮನಿಲ್ಲದೆ ನಾನು ಮಾತ್ರ ಹಿಂದಿರುಗಿದರೆ, ಅವನನ್ನು ಯಾವನೋ ಯಕ್ಷನು ನುಂಗಿದನೆಂದರೆ ಯಾರೂ ನಂಬಲಾರರು" ಎಂದನು ಬೋಧಿಸತ್ವ.

"ಆಹ ! ನಿಮಗೆ ದೇವಧರ್ಮ ತಿಳಿದಿರುವುದು ಮಾತ್ರವಲ್ಲ. ಅನುಭವವೂ ಇದೆ" ಎಂದು ಮೆಚ್ಚಿಕೊಂಡು ಯಕ್ಷಜಲರಾಕ್ಷಸನು, ಚಂದ್ರಕುಮಾರ, ಸೂರ್ಯಕುಮಾರರಿಬ್ಬರನ್ನೂ ಕರೆದುಕೊಂಡು ಬಂದು ಬೋಧಿಸತ್ವನಿಗೆ ಒಪ್ಪಿಸಿದನು.

ಮುಂದೆ ಬೇಗದಲ್ಲೇ ಮುದುಕರಾಜನು ತೀರಿಹೋದನೆಂದು ಗೊತ್ತಾಯಿತು. ಬೋಧಿಸತ್ವನು ಇಬ್ಬರು ತಮ್ಮಂದಿರೊಂದಿಗೆ ತನ್ನ ದೇಶಕ್ಕೆ ಹಿಂದಿರುಗಿ ಬಂದು, ಪಟ್ಟಾಭಿಷೇಕಮಾಡಿಸಿಕೊಂಡನು. ಆಗಲೇ ಚಂದ್ರಕುಮಾರನನ್ನು ಯುವರಾಜನನ್ನಾಗಿ ಮಾಡಿ, ಸೂರ್ಯಕುಮಾರನನ್ನು ಸೇನಾಧಿಪತಿಯಾಗಿಯೂ ನಿಯಮಿಸಿದನು. ತನ್ನ ಮಗನನ್ನು ಸುರಕ್ಷಿತವಾಗಿ ಕರೆದುಕೊಂಡು ಬಂದ ಬೋಧಿಸತ್ವನೇ ರಾಜನಾಗುವುದರಲ್ಲಿ ಸೂರ್ಯಕುಮಾರನ ತಾಯಿ ಸುಮುಖಿಳಾಗಿದ್ದಳು.





## ನಮ್ಮ ನದಿಗಳು :

# ತಮಸಾ

ಪೂರ್ವಕಾಲದಲ್ಲಿ ಶುಕ್ರಾಚಾರ್ಯನೆಂಬ ದೊಡ್ಡ ಮುನಿಯೊಬ್ಬನು ಒಂದು ವನದಲ್ಲಿ ವಾಸವಾಗಿದ್ದನು. ಅವನಿಗೆ ಅರಜಳೆಂಬ ಕುಮಾರಿಯೊಬ್ಬಳಿದ್ದಳು. ಅವರ ಕುಟೀರದ ಸಮೀಪದಲ್ಲಿರುವ ತಟಾಕದಲ್ಲಿ ಸ್ನಾನ ಮಾಡುವುದೆಂದರೆ ಅರಜಳಿಗೆ ಬಹಳ ಇಷ್ಟ.

ಒಂದು ದಿನ ಅರಜ ತಟಾಕದಲ್ಲಿ ಸ್ನಾನಮಾಡಿಕೊಂಡಿರುವಾಗ, ದಂಡಕನೆಂಬ ರಾಜನು ಆ ಕಡೆಗೆ ಬಂದು ಪೊದೆಯ ಮರೆಯಲ್ಲಿ ಅಡಗಿದ್ದುಕೊಂಡು, ಅವಳ ಅಂದ ಚೆಂದಗಳನ್ನು ನೋಡಿ ಮುಗ್ಧನಾಗಿ ಹೋದನು.





ಅರಜ ತಟಾಕದಿಂದ ತೀರದ ಮೇಲೆ ಬಂದಳು. ಆಗ ದಂಡಕನು ಅವಳ ಇದಿರಿಗೆ ಬಂದು, ತಾನು ಅವಳನ್ನು ಮದುವೆ ಮಾಡಿಕೊಳ್ಳುವೆನೆಂದೂ, ತನ್ನೊಂದಿಗೆ ಬರಬೇಕೆಂದೂ ಕೇಳಿದನು. ಅದಕ್ಕೆ ಅವಳು ಒಪ್ಪದಿರುವುದನ್ನು ನೋಡಿ, ಬಲವಂತದಿಂದ ಅವಳನ್ನು ಎಳೆದುಕೊಂಡು ಹೋಗಲು ಪ್ರಯತ್ನಿಸಿದನು.



ಅರಜ ಬಹಳ ಕಷ್ಟದಿಂದ ಅವನಿಂದ ತನ್ನನ್ನು
ಬಿಡಿಸಿಕೊಂಡು ಕುಟೀರಕ್ಕೆ ಓಡಿ ಹೋದಳು.
ದಂಡಕ ರಾಜನಿಂದ ತನಗೆ ಅವಮಾನವಾಯಿ
ತೆಂದು ತಂದೆಯೊಂದಿಗೆ ಹೇಳಿ ವಿಲಪಿಸಿದಳು.
ಮುನಿಗೆ ತಾಳಲಾಗದಷ್ಟು ಕೋಪ ಬಂದಿತು.

“ಈ ರಾಜ್ಯವು ಪಾಪಿಗಳಿಂದಲೇ ತುಂಬಿದೆ.
ಅಸಹಾಯಕರನ್ನು ರಕ್ಷಿಸಬೇಕಾದ ರಾಜನೇ
ಅವರನ್ನು ಪೀಡಿಸುತ್ತಾನೆ. ಈ ರಾಜ್ಯದಲ್ಲಿ
ಸತ್ಯವಂತ ಸಾಧು ಸಜ್ಜನರ ಹೊರತು ಉಳಿ
ದೆಲ್ಲರೂ ನಾಶವಾಗಲಿ” ಎಂದು ಶಾಪಕೊಟ್ಟನು.





ಮುನಿಯ ಶಾಪದ ಫಲಿತವಾಗಿ ಒಮ್ಮೆಗೇ ಅಗ್ನಿ
ಜ್ವಾಲೆಗಳೆದ್ದು ರಾಜ್ಯದೊಳಗೆಲ್ಲಾ ಮುತ್ತಿಗೆ ಹಾಕಿ
ದುವು. ಮುನಿಯ ವನವನ್ನು ಮಾತ್ರ ಅಗ್ನಿ
ಉರಿಸಲಿಲ್ಲ. ಅವನ ಕುಮಾರಿ ಅಗ್ನಿ ಆರಿ
ಹೋಗುವವರೆಗೂ ತಟಾಕದಲ್ಲೇ ಇದ್ದಳು. ರಾಜ್ಯ
ದೊಳಗಿನ ನದಿ ಸರೋವರಗಳೆಲ್ಲ ಇಂಗಿ
ಹೋದುವು. ಅರಜಳಿಂದ ಐಕ್ಯವಾದ ತಟಾಕವು
ಮಾತ್ರ ನೀರಿನಿಂದ ತುಂಬಿಕೊಂಡೇ ಇದ್ದಿತು.

ಅಗ್ನಿಜ್ವಾಲೆಗೆ ಸಿಕ್ಕದೆ ಉಳಿದವರು ದೂರ ದೂರ ಪ್ರಾಂತ್ಯಗಳಿಗೆ ಓಡಿಹೋದರು. ದಂಡಕ ರಾಜ್ಯವು ಬೂದಿಯ ರಾಶಿಗಳಿಂದ ತುಂಬಿತು, ನಿರ್ಮಾನುಷ್ಯವಾಯಿತು. ಒಂದೆರಡು ಪಕ್ಷಿಗಳ ಹೊರತು ಯಾವ ಪ್ರಾಣಿಗೂ ರಾಜ್ಯವನ್ನು ಸಮೀಪಿಸಲಾಗಲಿಲ್ಲ.






ಬಹಳ ಕಾಲದ ಮೇಲೆ ಸುರಿದ ಮಳೆಯ ಕಾರಣದಿಂದ, ಅಲ್ಲಿಯ ತಟಾಕವು ಒಂದು ಬೆಟ್ಟದೊರೆಯೊಂದಿಗೆ ಕೂಡಿ ನದಿಯಾಗಿ ಮಾರ್ಪಟ್ಟಿತು. ಆ ನದಿ ಮರುಭೂಮಿಯಂತಹ ನೆಲದ ಮೇಲೆ ಪ್ರವಹಿಸಲು ತೊಡಗಿತು. ಪಕ್ಷಿಗಳು ತಿಂದು ಉದುರಿಸಿದ ಹಣ್ಣುಗಳ ಬೀಜಗಳಿಂದ ಗಿಡಗಳು ಹುಟ್ಟಿದುವು. ಆ ಗಿಡಗಳು ಮತ್ತಷ್ಟು ಗಿಡಗಳನ್ನು ಆಕರ್ಷಿಸುವಂತಾದುವು.

ಕ್ರಮಕ್ರಮವಾಗಿ ನದಿಯ ಇಕ್ಕೆಲಗಳಲ್ಲಿಯೂ ಅರಣ್ಯವು ಏರ್ಪಟ್ಟು. ದಟ್ಟವಾಗಿ ಹರಡಿ ವಿಸ್ತರಿಸ ತೊಡಗಿತು. ದಂಡಕ ರಾಜ್ಯದಲ್ಲಿ ಉಂಟಾದ ಆ ಅರಣ್ಯಕ್ಕೆ ದಂಡಕಾರಣ್ಯವೆಂದೂ, ನದಿಗೆ ತಮಸಾ ನದಿಯೆಂದೂ ಮುನಿಗಳು ಹೆಸರಿಟ್ಟರು.






ಭಾರತದೇಶದಲ್ಲಿ ದಂಡಕಾರಣ್ಯವು ಸುಪ್ರಸಿದ್ಧ ವಾಗಿದೆ. ಸೀತಾರಾಮಲಕ್ಷ್ಮಣರು ವನವಾಸದ ಕಾಲವನ್ನು ಅಲ್ಲಿಯೇ ಕಳೆದರು. ಒಂದು ಕಡೆ ರಾಕ್ಷಸರಿಗೂ, ಪಿಶಾಚಿಗಳಿಗೂ, ಮತ್ತೊಂದು ಕಡೆ ಮುನಿಗಳಿಗೂ, ಸಾಧುಗಳಿಗೂ ದಂಡಕಾರಣ್ಯವು ವಾಸಸ್ಥಳವಾಯಿತು.

ತಮಸಾ ನದಿಯ ತೀರದಲ್ಲಿಯೇ ಆದಿಕವಿ ವಾಲ್ಮೀಕಿ. ತನ್ನ ಆಶ್ರಮವನ್ನು ನಿರ್ಮಿಸಿಕೊಂಡಿದ್ದನು. ಆ ನದಿಯ ತೀರದಲ್ಲಿಯೇ ಆದಿಕಾವ್ಯ ವಾದ ರಾಮಾಯಣದ ರಚನೆ ನಡೆಯಿತು.






ತಮಸಾ ನದಿಯ ತೀರದಲ್ಲಿಯೇ ಸೀತೆ ತನ್ನ ಮಕ್ಕಳಾದ ಲವ ಕುಶರನ್ನು ಬೆಳೆಸಿಕೊಂಡಿದ್ದಳು. ವಾಲ್ಮೀಕಿ ಮಹರ್ಷಿ ಅವರಿಗೆ ರಾಮಾಯಣ ವನ್ನು ಗಾನ ಮಾಡುವ ವಿಧಾನವನ್ನು ಕಲಿಸಿ ದನು. ಈ ದಿನಗಳಲ್ಲಿ ಕೂಡಾ ತಮಸಾ ನದಿ ದಂಡಕಾರಣ್ಯದ ಮೂಲಕವಾಗಿಯೇ ಪ್ರವಹಿಸಿ ಕೊಂಡಿದೆ.

# ಬೆಲೆಬಾಳುವ ಕಾಣಿಕೆ

**ಮ**ಣಿಮೇಖಲಾಪುರದ ರಾಜನಾದ ಗೋವರ್ಧನನು ಪ್ರತಿವರ್ಷವೂ ತನ್ನ ಜನ್ಮದಿನೋತ್ಸವವನ್ನು ವೈಭವದಿಂದ ನಡೆಸುತ್ತಿದ್ದನು. ಆ ದಿನ ಬಂದ ಕಾಣಿಕೆಗಳಲ್ಲಿ ಬೆಲೆಬಾಳುವ ಕಾಣಿಕೆ ಕೊಟ್ಟ ವ್ಯಕ್ತಿಗೆ ಔತಣದ ವೇಳೆಯಲ್ಲಿ ರಾಜನ ಪಕ್ಕದಲ್ಲಿಯೇ ಸ್ಥಾನಸಿಗುವ ಏರ್ಪಾಟು ನಡೆಯುತ್ತಿತ್ತು. ಅದನ್ನು ದೊಡ್ಡ ಗೌರವವಾಗಿ ಭಾವಿಸುವ ಎಷ್ಟೋ ಧನಿಕರು ರಾಜನಿಗೆ ಬೆಲೆಬಾಳುವ ಕಾಣಿಕೆ ಕೊಡುವುದರಲ್ಲಿ ಸ್ಪರ್ಧೆಗೆ ಬೀಳುತ್ತಿದ್ದರು.

ಈ ಪದ್ಧತಿ ಒಳ್ಳೆಯದಲ್ಲವೆಂದು ಭಾವಿಸಿದ ಸನ್ಯಾಸಿಯೊಬ್ಬನು, ಆ ರಾಜನ ಒಂದು ಜನ್ಮದಿನೋತ್ಸವಕ್ಕೆ ಒಂದು ಒಣ ರೊಟ್ಟಿಯನ್ನು ಕಾಣಿಕೆ ಕೊಡುತ್ತ, ಆದರೊಂದಿಗೆ ಒಂದು ಪತ್ರವನ್ನು ಇಟ್ಟನು. ಆ ಪತ್ರದಲ್ಲಿ ಹೀಗಿತ್ತು : "ಮಹಾರಾಜರೇ, ನಿಮಗೆ ಬೆಲೆಬಾಳುವ ಕಾಣಿಕೆ ಕೊಡುವ ಶಕ್ತಿ ನನಗಿಲ್ಲ. ಆದರೂ ನಿಮ್ಮ ಮೇಲೆ ಬೆಟ್ಟದಷ್ಟು ಗೌರವವಿದೆ. ಆದುದರಿಂದ ಕಷ್ಟಪಟ್ಟು ಸಂಪಾದಿಸಿಕೊಂಡ ಈ ರೊಟ್ಟಿಯನ್ನು ನಿಮಗೆ ಕೊಡುತ್ತಿದ್ದೇನೆ. ಒಣ ರೊಟ್ಟಿ ಎಂದು ಹಗುರಾಗಿ ನೋಡಬಾರದು. ಇದು ನನ್ನ ಒಂದು ದಿನದ ಆಹಾರ."

ಆ ಪತ್ರ ಓದಿದ ಕೂಡಲೇ ರಾಜನಿಗೆ ತನ್ನ ತಪ್ಪು ಗೊತ್ತಾಯಿತು. ತುಂಬುಮನದಿಂದ ಪ್ರೇಮಪೂರ್ವಕವಾಗಿ ಕೊಡುವ ಪ್ರತಿ ಕಾಣಿಕೆಯೂ ಬೆಲೆಬಾಳುವಂತಹುದೇ ಎಂದು ಅರ್ಥಮಾಡಿಕೊಂಡನು. ಆ ದಿನ ಔತಣದ ಸಮಯದಲ್ಲಿ ಸನ್ಯಾಸಿಗೆ ರಾಜನು ತನ್ನ ಪಕ್ಕದಲ್ಲಿ ಆಸನವಿತ್ತನು. ಆಗ ಸನ್ಯಾಸಿ ತನಗೆ ತಮ್ಮ ಪ್ರಜೆಗಳ ಸ್ಥಾನವೇ ಒಳ್ಳೆಯದೆಂದು ಹೇಳಿದನು.





# ವೇಷಧಾರಿ

ಅನೇಕ ವರ್ಷಗಳ ಹಿಂದೆ ಸಿಂಹಪುರಿ ರಾಜ್ಯದಲ್ಲಿ ಮಲ್ಲಯ್ಯನೆಂಬ ಬಹುಗಟ್ಟಿಗನಾದ ವೇಷಧಾರಿ ಇದ್ದನು. ಅವನು ಎಂತಹ ವೇಷವನ್ನಾದರೂ ಹಾಕಿಕೊಳ್ಳಬಲ್ಲವನು. ಆಯಾ ವೇಷಗಳಿಗೆ ತಕ್ಕ ಹಾವಭಾವಗಳಿಂದ, ಪಂಡಿತ ಪಾಮರರನ್ನು ರಂಜಿಸಿ ಮೆಚ್ಚು ಗಳಿಸುತ್ತಿದ್ದನು.

ಒಂದು ಸಾರಿ ದಸರೆ ಹಬ್ಬದ ದಿನಗಳಲ್ಲಿ ಒಂದು ಗ್ರಾಮದಲ್ಲಿ ಯುವಕರ ನಡುವೆ ಬಲಪ್ರದರ್ಶನದ ಸ್ಪರ್ಧೆಯ ಆಟ ನಡೆಯುತ್ತಿದ್ದಿತು. ಗ್ರಾಮಸ್ಥರು ದೊಡ್ಡ ಗುಂಪಾಗಿ ಬಂದು ಕೂಡಿ ಆಗಾಗ ಹರ್ಷ ಧ್ವನಿ ಮಾಡಿಕೊಂಡಿದ್ದರು. ಆ ಸಮಯದಲ್ಲಿ ಮಲ್ಲಯ್ಯನು ಯಾರಿಗೂ ಏನೂ ಹೇಳದೆ, ಆ ದೇಶದ ಸೇನಾನಾಯಕನ ವೇಷದಲ್ಲಿ ಅಲ್ಲಿಗೆ ಬಂದನು. ಗ್ರಾಮದ ಹಿರಿಯರು ಅವನನ್ನು ನೋಡಿ, ಅವನ ಕಂಠಸ್ವರವನ್ನು ಕೇಳಿ, ಸೇನಾನಾಯಕನೆಂದೇ ಭ್ರಮಿಸಿ ಬಹಳ ಭಕ್ತಿ ಗೌರವಗಳಿಂದ ಆಹ್ವಾನಿಸಿ ಉನ್ನತಾಸನ ವಿತ್ತು ಕೂಡಿಸಿದರು.

ಆಟಗಳೆಲ್ಲ ಮುಗಿದ ಮೇಲೆ ಆದರಲ್ಲಿ ಗೆದ್ದ ಯುವಕರಿಗೆ ಗ್ರಾಮದ ಹಿರಿಯರು ಮಲ್ಲಯ್ಯನ ಕೈಯಿಂದಲೇ ಬಹುಮಾನ ಕೊಡಿಸಿದರು. ಅವನು ಸೇನಾನಾಯಕನ ಧೀರ ಗಂಭೀರ ಭಾವಗಳನ್ನು ಒಸರುತ್ತ ಬಹುಮಾನಗಳನ್ನು ಹಂಚಿ ಕೊಟ್ಟನು. ಕಡೆಗೆ ಅಲ್ಲಿ ಸೇರಿದವರನ್ನು ನೋಡಿ ತನ್ನ ಸಹಜ ಕಂಠದಿಂದ ಹೀಗೆಂದನು : "ನೀವೆಲ್ಲರೂ ಸಮೂಹ ವಾಗಿರುವುದರಿಂದ ಮಹಾನುಭಾವರಾಗಿರುವಿರಿ. ಆದುದರಿಂದ ನೀವೆಲ್ಲರೂ ನನ್ನನ್ನು ಕ್ಷಮಿಸಬೇಕು. ನಿಮ್ಮ ಈ ಬಲಪ್ರದರ್ಶನವನ್ನು ನೋಡಲು ನಿಜ ವಾದ ಸೇನಾನಾಯಕರು ಇಲ್ಲದೇ ಹೋದುದೊಂದು ದುರದೃಷ್ಟವಾಗಿದೆ. ಅವರೇ ಬಂದು ಇಲ್ಲಿಯ ಯುವಕರ ಬಲಪ್ರದರ್ಶನವನ್ನು ನೋಡಿದ್ದರೆ, ಕೂಡಲೇ ಇವರೆಲ್ಲರಿಗೂ ಸೈನ್ಯದಲ್ಲಿ ಒಳ್ಳೊಳ್ಳೆಯ ಪದವಿ ಕೊಟ್ಟುಬಿಡುತ್ತಿದ್ದರು."

ಈ ಮಾತನ್ನು ಕೇಳಿ ಅಲ್ಲಿ ಸೇರಿದವರಿಗೆಲ್ಲಾ ಬಹಳ ಆಶ್ಚರ್ಯವಾಯಿತು. ಆಗ ಸುತ್ತುಮುತ್ತಲಿನ ಊರೊಳಗೆ ಪಂಡಿತನೆಂದು ಹೆಸರು ಪಡೆದ ಉದಯ ಭಟ್ಟನೆಂಬವನು ಮಲ್ಲಯ್ಯನ ಬಳಿಗೆ ಬಂದು, "ಮಲ್ಲಯ್ಯಾ, ನಿನ್ನ ವೇಷ ಅತ್ಯದ್ಭುತ ! ನಾನು ಈ ದಿನವೇ ನಿನ್ನನ್ನು ನೋಡುವುದು !" ಎಂದನು.

ಕೆ. ಜಯಾ

ಮಲ್ಲಯ್ಯನು ಸೇನಾ ನಾಯಕನ ವೇಷ ತೆಗೆದು, ವಿನಯದಿಂದ, "ಅಯ್ಯಾ, ನನ್ನಿಂದ ಏನಾದರೂ ತಪ್ಪು ನಡೆದಿದ್ದರೆ ಕ್ಷಮಿಸಬೇಕು. ಹಬ್ಬದ ದಿನಗಳಲ್ಲಿ ಎಲ್ಲರನ್ನೂ ಸ್ವಲ್ಪ ವಿನೋದಪಡಿಸೋಣವೆಂದು ಈ ವೇಷದಲ್ಲಿ ಬಂದೆ. ಸೇನಾನಾಯಕರನ್ನು ಗೇಲಿ ಮಾಡುವ ಬುದ್ಧಿ ನನಗಿಲ್ಲ" ಎಂದನು.

ಉದಯಭಟ್ಟ ನಗುತ್ತ, "ಭಲೆ! ವಿನಯ ತೋರಿಸಲು ಆ ವೇಷ ಸರಿಯಲ್ಲವೆಂಬ ಜ್ಞಾನವೂ ನಿನಗಿದೆ. ವೇಷಕ್ಕೆ ತಕ್ಕ ಪ್ರವರ್ತನೆ! ಇಷ್ಟೆಲ್ಲ ಲೋಕಜ್ಞಾನವಿರುವ ನೀನು, ನಮ್ಮ ರಾಜ್ಯವನ್ನಾಳುವ ವೀರಸೇನ ಮಹಾರಾಜರ ಬಳಿಗೆ ಏಕೆ ಹೋಗಬಾರದು?" ಎಂದು ಕೇಳಿದನು.

"ನನ್ನ ವೇಷವನ್ನು ಮಹಾರಾಜರ ಸಮಕ್ಷಮದಲ್ಲಿ ಪ್ರದರ್ಶಿಸುವುದೇ? ಸಾಧ್ಯವೇ ಇದು?" ಎಂದು ಆಶ್ಚರ್ಯಪಟ್ಟನು ಮಲ್ಲಯ್ಯ.

"ಏಕೆ ಸಾಧ್ಯವಾಗದು? ನಮ್ಮ ಮಹಾರಾಜರು ಒಳ್ಳೆಯ ಕಲಾ ಪೋಷಕರು, ಸಮರ್ಥರಾದ ಕಲಾಕಾರರನ್ನು ಒಳ್ಳೆಯ ರೀತಿಯಲ್ಲಿ ಸತ್ಕರಿಸುತ್ತಾರೆ. ನನ್ನ ಮಾತು ತೆಗೆದುಹಾಕದೆ, ರಾಜದರ್ಶನಮಾಡು" ಎಂದು ಪ್ರೋತ್ಸಾಹಪಡಿಸಿದನು ಉದಯಭಟ್ಟ.

ಇಷ್ಟು ದೊಡ್ಡ ಪಂಡಿತರಿಂದ ದೊರೆತ ಪ್ರೋತ್ಸಾಹದಿಂದ ಮಲ್ಲಯ್ಯನು ಧೈರ್ಯ ತಂದುಕೊಂಡು ರಾಜಧಾನಿಗೆ ಹೋಗಿ, ವೀರಸೇನ ರಾಜನನ್ನು ದರ್ಶನ ಮಾಡಿದನು. ರಾಜನ ಮುಂದೆ ತಾನು ಎರಡು ವೇಷಗಳನ್ನು ಪ್ರದರ್ಶಿಸಲಿರುವುದಾಗಿ ಕೇಳಿಕೊಂಡನು. ಅದಕ್ಕೆ ರಾಜನಿಂದ ಅನುಮತಿ ಕೂಡಾ ಸಿಕ್ಕಿತು.

ಮೊದಲನೇ ದಿನ ಮಲ್ಲಯ್ಯನು, ರಾಜನು ಸಭೆಯಲ್ಲಿರುವಾಗ ಸನ್ಯಾಸಿಯ ವೇಷದಲ್ಲಿ ಪ್ರವೇಶಿಸಿದನು. ರಾಜನನ್ನೂ ಸಭೆಯನ್ನೂ ಹರಸಿ, ದೇಶದೇಶ ತಿರುಗುತ್ತಾ ಹಿತೋಪದೇಶ ಮಾಡಲು ಬಂದೆನೆಂದು ಹೇಳಿ, ವೇದಾಂತವನ್ನು ಕುರಿತು ಪ್ರಬಂಧ ಬೋಧನೆ ಮಾಡಿದನು. ಉಪನ್ಯಾಸದ ಮಧ್ಯದಲ್ಲಿ ಸಂಸ್ಕೃತ ಶ್ಲೋಕಗಳನ್ನು ಉದಾಹರಣೆಯಾಗಿ



ಹೇಳಿದನು. ಅದನ್ನೆಲ್ಲ ಕೇಳಿ ರಾಜನೂ ಸಭಿಕರೂ ತುಂಬಾ ಹರ್ಷಿತರಾಗಿ ತಲೆದೂಗಿದರು.

ಕಡೆಗೆ ರಾಜನು ಅವನಿಗೆ ನೂರು ವರಹಗಳನ್ನು ಬಹುಮಾನವಾಗಿ ಕೊಡಲು ನೋಡಿದನು. ಆದರೆ ಮಲ್ಲಯ್ಯನು ಅದನ್ನು ತೆಗೆದುಕೊಳ್ಳದೆ, ಗಂಭೀರ ಮುಖಭಾವದಿಂದ, "ಮಹಾರಾಜಾ, ಜೀವಿತದ ಮೇಲೆ ವೈರಾಗ್ಯ ತಾಳಿ ಸನ್ಯಾಸಿಯಾದ ನನಗೆ ಧನ ದಿಂದ ಏನು ಉಪಯೋಗ?" ಎಂದು ಹೇಳಿ ಅಲ್ಲಿಂದ ಹೊರಟುಹೋದನು.

ಮರುದಿನ ಮಲ್ಲಯ್ಯನು ನರ್ತಕಿಯ ವೇಷದಲ್ಲಿ ರಾಜನ ಸಭೆಗೆ ಬಂದನು. ಅದ್ಭುತವಾಗಿ ಹಾವ ಭಾವಗಳ ವಿಲಾಸವನ್ನು ಪ್ರದರ್ಶಿಸುತ್ತ ಬಹಳ ಚೆನ್ನಾಗಿ ನಾಟ್ಯವಾಡಿದನು, ಈ ದಿನವೂ ಸಭಿಕರು ಅವನ ವಿದ್ಯಾಪಾಟವವನ್ನು ಮೆಚ್ಚುತ್ತ ಹರ್ಷಧ್ವಾನ ಮಾಡಿದರು. ರಾಜನೂ ಸಂತೋಷಪಟ್ಟು ಅವನಿಗೆ ನೂರು ವರಹ ಬಹುಮಾನ ಕೊಡಲು ಅಪ್ಪಣೆ ಮಾಡಿದನು.

ಮಲ್ಲಯ್ಯನು ರಾಜನಿಗೆ ವಿನಯದಿಂದ ನಮಸ್ಕಾರಮಾಡಿ, "ಮಹಾಪ್ರಭೂ! ತಾವು ದೊಡ್ಡ ಕಲಾಭಿಮಾನಿಗಳೆಂದು ಕೇಳಿ ಬಂದಿದ್ದೇನೆ. ಆದರೆ ನೀವು ಕೊಡುವ ನೂರು ವರಹಗಳ ಬಹುಮಾನವು ನಿಮ್ಮ ಕಲಾರಸನೆಯನ್ನು ಅಲ್ಪಗೊಳಿಸುತ್ತದೆ ಸ್ವಾಮಿ, ನನ್ನ ವಿದ್ಯೆಗೆ ತಕ್ಕ ಬಹುಮಾನವನ್ನೇ ನಾನು ಬಯಸುತ್ತೇನೆ ಪ್ರಭೂ!" ಎಂದನು ನರ್ತಕಿಯ ಸ್ವರದಲ್ಲಿ.

ರಾಜನು ಅವನು ಹೇಳಿದುದನ್ನು ಕೇಳಿ ಆಶ್ಚರ್ಯಪಟ್ಟು, "ಇದೇನು ಹೇಳುವೆ? ನಿನ್ನೆ ನಿನ್ನನ್ನು ಮೆಚ್ಚಿ ನೂರು ವರಹ ಕೊಡಲು ಬಂದರೆ ಬೇಡವೆಂದು ಹೇಳಿದವನು ಈದಿನ ಇನ್ನೂ ಬೇಕೆನ್ನುವೆಯಲ್ಲಾ? ನಿನ್ನ ಪ್ರವರ್ತನೆಗೆ ಏನು ಅರ್ಥವೋ?" ಎಂದನು.

ಅದಕ್ಕೆ ಮಲ್ಲಯ್ಯನು ಮುಖ್ಯ ವೇಷಭಾಗವನ್ನು ಕಳಚಿ, ವಿನಯದಿಂದ, "ನಿನ್ನೆ ನಾನು ಹಾಕಿಕೊಂಡದ್ದು ಸನ್ಯಾಸಿಯ ವೇಷ ಪ್ರಭೂ. ಅದಕ್ಕೆ ತಕ್ಕ ಹಾಗೆ ವೇದಾಂತ ಧೋರಣೆಯಲ್ಲಿ ವೈರಾಗ್ಯ ಭಾವವನ್ನು ಪ್ರದರ್ಶನ ಮಾಡಿದ್ದೇನೆ. ಈ ದಿನ ನನ್ನದು ನರ್ತಕಿಯ ವೇಷ ತಾನೆ? ನರ್ತಕಿಗೆ ಸಹಜವಾಗಿ ಪ್ರಾಪಂಚಿಕ ವಿಷಯದ ಮೇಲೆ ಆಸಕ್ತಿ ಹೆಚ್ಚಾಗಿರುತ್ತದೆ. ಅವಳಿಗೆ ಧನದಾಹವೂ ಹೆಚ್ಚು. ವೇಷಕ್ಕೆ ತಕ್ಕ ಪ್ರವರ್ತನೆಯನ್ನೇ ಪ್ರದರ್ಶಿಸಿದ್ದೇನೆ ಪ್ರಭುಗಳೇ" ಎಂದನು.

ರಾಜನು ಅವನ ಮಾತುಗಳಿಗೆ ಅತ್ಯಾನಂದಪಟ್ಟು, ಐನೂರು ವರಹಗಳನ್ನು ತರಿಸಿ ಅವನಿಗೆ ಬಹುಮಾನವಾಗಿ ಕೊಟ್ಟನು.






ಒಂದು ಕಾಲದಲ್ಲಿ ಮಹಾ ಕೋಟೀಶ್ವರನೆಂದು ಖ್ಯಾತನಾದ ವಜ್ರಗುಪ್ತನೆಂಬ ವರ್ತಕನಿದ್ದನು. ಅವನಿಗೆ ಇಬ್ಬರು ಹೆಂಡತಿಯರು. ಅವರಿಬ್ಬರೂ ತಮ್ಮೊಳಗೆ ಅಕ್ಕತಂಗಿಯರಂತೆ ಅನ್ಯೋನ್ಯರಾಗಿದ್ದರು. ಹಿರಿಯ ಹೆಂಡತಿಗೆ ವಾಸಂತಿ ಎಂಬ ಮಗಳಿದ್ದಳು. ಚಿಕ್ಕ ಹೆಂಡತಿಯ ಮಗಳು ಪದ್ಮಾವತಿ. ಇಬ್ಬರು ಹೆಣ್ಣು ಮಕ್ಕಳೂ ಹೆಚ್ಚು ಕಡಿಮೆ ಒಂದೇ ವಯಸ್ಸಿನವರು. ಸ್ವಭಾವದಲ್ಲಿ ಮಾತ್ರ ಭಿನ್ನತೆ ಇದ್ದಿತು. ವಾಸಂತಿ ಕಠಿಣ ಗುಣದವಳು. ಇನ್ನೊಬ್ಬರ ದೊಡ್ಡತನವನ್ನೂ, ಸುಖವನ್ನೂ ನೋಡಿ ಅವಳು ಸಹಿಸಿಕೊಳ್ಳಲಾರಳು. ಆಳು ಕಾಳುಗಳ ಮೇಲೆ ದರ್ಪ ತೋರಿಸಿಕೊಂಡಿದ್ದರೇನೇ ಅವಳಿಗೆ ಆನಂದ.

ಈ ಕಾರಣಗಳಿಂದ ಮನೆಯೊಳಗೆ ಎಲ್ಲರೂ ಪದ್ಮಾವತಿಯ ಮೇಲೆ ಹೆಚ್ಚಿನ ಪ್ರೇಮ ಮಮಕಾರಗಳಿಂದ ಇರುವರು. ಇಷ್ಟೊಂದು ವ್ಯತ್ಯಾಸವಿದ್ದರೂ ಆ ಅಕ್ಕ ತಂಗಿಯರ ರೂಪು ರೇಖೆಗಳು ಸಾಧಾರಣ ಒಂದೇ ರೀತಿಯಾಗಿದ್ದುವು. ತಿಳಿಯದವರು ಥಕ್ಕನೆ ನೋಡಿದರೆ ಇವಳನ್ನು ಅವಳೆಂದೂ ಅವಳನ್ನು ಇವಳೆಂದೂ ತಿಳಿದುಬಿಡುವರು.

ಪದ್ಮಾವತಿಗಿಂತ ವಾಸಂತಿ ಕೆಲವು ದಿನಗಳಿಗಷ್ಟೇ ದೊಡ್ಡವಳು. ತಾನು ಎಷ್ಟು ಸ್ವಾರ್ಥಪರಳಾದರೂ, ಕಠಿಣ ಗುಣದವಳಾದರೂ ವಾಸಂತಿ ತಾನು ಬಹಳ ಒಳ್ಳೆಯವಳೆಂದೇ ಅಂದುಕೊಂಡಿದ್ದಳು. ತನ್ನಂತಹ ಭಾಗ್ಯವಂತರು ಹೀಗೆ ಕಠಿಣ ಗಂಭೀರರಾಗಿರುವುದೇ ಒಳ್ಳೆಯ ಲಕ್ಷಣವೆಂಬುದು ಅವಳ ಅಭಿಪ್ರಾಯ. ಆದರಿಂದ ತನಗೆ ಕೆಟ್ಟ ಹೆಸರು ಬರುವ ಸಂಗತಿಯೂ ಅವಳಿಗೆ ಗೊತ್ತಿತ್ತು. ಅದಕ್ಕೆ ಕಾರಣ ಪದ್ಮಾವತಿಯ ಪ್ರವರ್ತನೆ ಎಂದುಕೊಳ್ಳುತ್ತಿದ್ದಳು. ಪದ್ಮಾವತಿಯ ಕೆಲಸಗಳೆಲ್ಲವೂ ತನಗೆ ಕೆಟ್ಟ ಹೆಸರು ಬರಿಸಲಿಕ್ಕಾಗಿಯೇ ಎಂದುಕೊಂಡು, ತಂಗಿಯೊಂದಿಗೆ ಕೋಪಿಸುವಳು.

ಆದರೆ ಪದ್ಮಾವತಿ ಮಾತ್ರ ಅವಳೊಂದಿಗೆ, "ಯಾಕೆ ಅಕ್ಕಾ ದಿನಾ ನನ್ನನ್ನು ಬಯ್ದುಕೊಂಡಿರುತ್ತೀ ? ನಾವಿಬ್ಬರೂ ಸ್ನೇಹದಿಂದಿದ್ದರೇನೇ ನಾಲ್ಕು ಮಂದಿ ಗೌರವಿಸುತ್ತಾರೆ" ಎನ್ನುವಳು.

"ಎಲ್ಲರ ಗೌರವ ಹಾಗಿರಲಿ. ಮೊದಲು ನೀನು ನನ್ನನ್ನು ಗೌರವಿಸಲು ಕಲಿ. ನೀನೂ ನನ್ನ ಹಾಗೇ ತಲೆಯೆತ್ತಿ ಜೋರಿನಿಂದಿರಲು ಅಭ್ಯಾಸಮಾಡು" ಎನ್ನುವಳು ವಾಸಂತಿ.

ಜಿ. ಆರ್. ಲಕ್ಷ್ಮಿ



ವಾಸಂತಿಯ ಹಾಗೆ ಪ್ರವರ್ತಿಸಲು ಪದ್ಮಾವತಿಯಿಂದಾಗುತ್ತಿರಲಿಲ್ಲ. ಆದುದರಿಂದ ವಾಸಂತಿಗೆ ಪದ್ಮಾವತಿಯ ಮೇಲೆ ಕೋಪವೇ ಉಳಿಯಿತು.

ಹೀಗಿರುವಾಗ ಅವರ ಮನೆಗೆ ಚಂದ್ರಕಾಂತನೆಂಬ ಶಿಲ್ಪಿಯೊಬ್ಬನು ಬಂದನು. ವಜ್ರಗುಪ್ತನು ತನ್ನ ಭವನದ ಆವರಣದಲ್ಲಿ ಒಂದು ಕಲಾಮಂದಿರವನ್ನು ನಿರ್ಮಿಸಿ, ಅದರಲ್ಲಿ ಒಳ್ಳೊಳ್ಳೆಯ ಶಿಲ್ಪಗಳನ್ನು ಪ್ರತಿಷ್ಠಿಸಿ ಸೊಬಗು ಗೊಳಿಸಬೇಕೆಂದು ಆತನನ್ನು ಬರಮಾಡಿಸಿಕೊಂಡಿದ್ದನು.

ಯುವಕನಾದ ಚಂದ್ರಕಾಂತನು ಚೆನ್ನಾಗಿ ನುರಿತ ಕಲಾಕಾರನಾಗಿದ್ದನು. ಅವನು ತನಗೆ ನಿಯಮಿಸಿದ ಕೆಲಸವನ್ನು ಶ್ರದ್ಧೆಯಿಂದ ಮಾಡಲು ತೊಡಗಿದನು. ಅವನು ಶಿಲ್ಪಗಳನ್ನು ಕೆತ್ತಿ ರೂಪಿಸುವ ಚೆಂದವನ್ನು ನೋಡಲು ವಜ್ರಗುಪ್ತನ ಕುಮಾರಿಯರಿಬ್ಬರೂ ದಿನಾ ಬರುತ್ತಿದ್ದರು. ಇಬ್ಬರೂ ಅವನನ್ನು ಮಾತಾಡಿಸುತ್ತಿದ್ದರು. ಶಿಲ್ಪ ವಿದ್ಯೆಯನ್ನು ಕುರಿತು ಅವರು ಕೇಳುವ ಪ್ರಶ್ನೆಗಳಿಗೆ ಅವನೂ ಉತ್ಸಾಹದಿಂದ ಉತ್ತರ ಕೊಡುತ್ತಿದ್ದನು. ಅವರಿಬ್ಬರೂ ಅವನನ್ನು ಮಾತಾಡಿಸುವುದರಲ್ಲಿ ವ್ಯತ್ಯಾಸವಿದ್ದಿತು.

ಪದ್ಮಾವತಿ ಚಂದ್ರಕಾಂತನೊಂದಿಗೆ ವಿನಯದಿಂದಲೇ ಮಾತಾಡುವಳು. ಮೃದು ಸ್ವರದಿಂದಲೇ ಪ್ರಶ್ನಿಸುತ್ತಿದ್ದಳು. ಆದರೆ ವಾಸಂತಿ, ಯಜಮಾನಿಯ ಹಾಗೆ ಅಹಂಕಾರ ಭಾವದಿಂದಲೇ ಮಾತಾಡುವಳು. ಏನೋಯ್ ಎಂದು ಆಳುಗಳನ್ನು ಕೇಳುವ ಹಾಗೆ ಕೇಳುವಳು. ಆದರೆ ಚಂದ್ರಕಾಂತನು ಅದನ್ನೇನೂ ಹಿಡಿಸಿಕೊಳ್ಳದೆ ಇಬ್ಬರಿಗೂ ಸೌಮ್ಯತೆಯಿಂದಲೇ ಉತ್ತರ ಕೊಡುತ್ತಿದ್ದನು.

ಇದು ವಾಸಂತಿಗೆ ವಿಚಿತ್ರವಾಗಿ ತೋರುತ್ತಿತ್ತು. ಪದ್ಮಾವತಿಯೊಂದಿಗೆ ಅಭಿಮಾನದಿಂದ, ಸಂತೋಷ ಭಾವದಿಂದ ಮಾತಾಡುವವರೆಲ್ಲರೂ ವಾಸಂತಿಯೊಂದಿಗೆ ಭಯ ವಿನಯಗಳನ್ನು ಪ್ರದರ್ಶಿಸಿಕೊಂಡೇ ಮಾತಾಡುವರು. ಚಂದ್ರಕಾಂತನಲ್ಲಿ ಅಂತಹ ವ್ಯತ್ಯಾಸವೇನೂ ಅವಳಿಗೆ ಕಾಣಿಸಲಿಲ್ಲ. ಹಾಗಾದರೆ ಅವನು ತನ್ನನ್ನು ಕುರಿತು ಏನು ಅಂದುಕೊಳ್ಳುವನೆಂದು ತಿಳಿದುಕೊಳ್ಳಬೇಕೆಂದು ಅವಳಿಗೆ ತೋರ ತೊಡಗಿತು. ಅಂತಲೇ ಪದ್ಮಾವತಿ ಇಲ್ಲದ ಸಮಯದಲ್ಲಿಯೇ ಚಂದ್ರಕಾಂತನ ಬಳಿಗೆ ಬರತೊಡಗಿದಳು.

ಒಂದು ದಿನ ಚಂದ್ರಕಾಂತನು ವಾಸಂತಿ ಆಶ್ಚರ್ಯ ಪಡುವ ಹಾಗೆ, "ನೀವಿಬ್ಬರೂ ಹೆಚ್ಚು ಕಡಿಮೆ ಒಬ್ಬರ ಹಾಗೇ ಇದ್ದರೂ ನೀವೇ ಅಕ್ಕ ಅಂತ ಇತ್ತೀಚೆಗಷ್ಟೇ ತಿಳಿಯಿತು. ಯಾಕೋ ನಿಮ್ಮ ಮೇಲೆಯೇ ಹೆಚ್ಚು ಇಷ್ಟವೆನಿಸುತ್ತದೆ ನನಗೆ. ನಿಮ್ಮ ಮಾತೇ ಕೇಳಲು ಚೆನ್ನು" ಎಂದನು.

ವಾಸಂತಿ ಅವನ ಮಾತನ್ನು ನಂಬದೆ, "ನೀನು ಬೇಕಂತ ಸುಳ್ಳು ಹೇಳುತ್ತೀ" ಎಂದಳು.

"ಸುಳ್ಳು ಹೇಳಬೇಕಾದ ಅಗತ್ಯ ನನಗಿಲ್ಲ. ಇರುವುದನ್ನೇ ಹೇಳಿದೆ" ಎಂದನು ಚಂದ್ರಕಾಂತ.



ವಾಸಂತಿ ಅವನನ್ನು ಚುರುಗುಟ್ಟಿ ನೋಡುತ್ತ, "ನೀನು ನಮ್ಮ ಹತ್ತಿರ ಹಣ ಪಡೆದುಕೊಂಡು ಕೆಲಸ ಮಾಡಲಿಕ್ಕೆ ಬಂದವನು. ನಾವು ಯಜಮಾನರು. ನೀನೊಬ್ಬ ಕೆಲಸದ ಆಳು. ನಿನ್ನೊಂದಿಗೆ ನಾನು ಯಜಮಾನತಿಯ ಹಾಗೆ ಮಾತಾಡುವುದು ಸಹಜವೇ. ಪದ್ಮಾವತಿ ನನ್ನ ಹಾಗಲ್ಲ. ಬುದ್ಧಿ ಸ್ವಲ್ಪ ಮಂದ. ನೀನೇ ಯಜಮಾನನಿದ್ದ ಹಾಗೆ, ತಾನು ಸೇವಕಳಿದ್ದ ಹಾಗೆ ಅಂದುಕೊಂಡೇ ಮಾತಾಡ್ತಾಳೆ. ನಿನ್ನಂಥ ಆಳುಕಾಳುಗಳಿಗೆಲ್ಲ ಅವಳ ಹಾಗೆ ಮಾತಾಡುವುದೇ ಇಷ್ಟವಾಗಿರುತ್ತದೆಂದು ನನಗೆ ಗೊತ್ತು" ಎಂದಳು.

ಚಂದ್ರಕಾಂತನು ಸಮಾಧಾನದಿಂದ, "ಆ ಮಾತು ನಿಜವಲ್ಲ ಬಿಡಿ. ನಾನೊಬ್ಬ ಕಲಾಕಾರನಾದುದರಿಂದ ಹೇಳುತ್ತೇನೆ. ನಿಮ್ಮಲ್ಲಿ ಹೆಚ್ಚು ಸೌಂದರ್ಯವಿದೆ. ಅಹಂಕಾರದಿಂದ ಸೌಂದರ್ಯ ಹೆಚ್ಚುತ್ತದೆ. ಆದುದರಿಂದ ನಾನು ನಿಮ್ಮ ಅಂದಚೆಂದಗಳಿಗೆ ದಾಸನಾದೆನು. ನೀವು ಹೇಗೆ ಮಾತಾಡಿದರೂ ನನಗೆ ಚೆನ್ನಾಗಿಯೇ ಇರುತ್ತದೆ. ಇನ್ನೊಂದು ಬಗೆಯಲ್ಲಿ ಹೇಳುವುದಾದರೆ ಕ್ಷಮಿಸಬೇಕು, ನಾನು ನಿಮ್ಮನ್ನು ಪ್ರೇಮಿಸುತ್ತೇನೆ" ಎಂದನು.

ವಾಸಂತಿಗೆ ಕೋಪ ಬಂತು. "ನಾನು ನನಗಿಂತ ಹೆಚ್ಚಿನವನನ್ನು ಮಾತ್ರ ಪ್ರೇಮಿಸುವುದು, ನಿನ್ನಂಥ ಬಡ ಆಳುಗಳನ್ನು ಪ್ರೇಮಿಸಲಾರೆನೆಂದು ತಿಳಿಯಬೇಡವೇ ನಿನಗೆ ?" ಎಂದಳು.

"ನನಗೆ ತಿಳಿದರೇನು ಫಲ ? ನನ್ನ ಪ್ರೇಮಕ್ಕೆ ತಿಳಿಯಬೇಡವೇ ?" ಎಂದನು ಚಂದ್ರಕಾಂತ.

ವಾಸಂತಿಯ ಮನಸ್ಸಿಗೊಂದು ಹೆಮ್ಮೆಯ ಸಂತೋಷವೆನಿಸಿತು. ಇಷ್ಟು ಕಾಲದ ಮೇಲೆ ತನ್ನನ್ನು ಪ್ರೇಮಿಸುವೆನೆಂದು ಒಬ್ಬನು ಹೇಳಿದುದೇ ಅವಳ ಸಂತೋಷಕ್ಕೆ ಕಾರಣ. ಆಮೇಲೆ ಅವಳು ಆಗಾಗ ಚಂದ್ರಕಾಂತನ ಬಳಿಗೆ ಬಂದು ಅವನನ್ನು ಕೀಳ್ಮಟ್ಟಕ್ಕೆ ಇಳಿಸಿಕೊಂಡೇ ಮಾತಾಡುತ್ತಿದ್ದಳು.

"ಅದೇಕೆ ನನ್ನನ್ನು ಒಬ್ಬ ಹೀನನ ಹಾಗೇ ನೋಡುವಿರೋ ನನಗೆ ಗೊತ್ತಾಗುವುದಿಲ್ಲ" ಎಂದು ಒಂದು ದಿನ ಚಂದ್ರಕಾಂತನು ನೊಂದುಕೊಂಡೇ ಹೇಳಿದನು.

"ಬಡ ಜನರು ದೊಡ್ಡವರನ್ನು ಹೊಗಳಿಕೊಂಡೇ ಮಾತಾಡುತ್ತಾರೆ. ದೊಡ್ಡವರು ಬಡ ಜನರನ್ನು ಹೀನಪಡಿಸಿಕೊಂಡೇ ಮಾತಾಡುತ್ತಾರೆ. ಅದೇ ಸಹಜ. ತಪ್ಪೇನೂ ಇಲ್ಲ." ಎಂದು ವಾಸಂತಿ ಚಂದ್ರಕಾಂತನಿಗೆ ಉತ್ತರಕೊಟ್ಟು, "ನೀನು ನನ್ನನ್ನು ಪ್ರೇಮಿಸುತ್ತೇನೆಂದರೆ ನನಗೇನಿಲ್ಲ. ಮದುವೆ ಮಾಡಿಕೊಳ್ಳುವ ಆಸೆ ಮಾತ್ರ ಇಟ್ಟುಕೊಳ್ಳಬೇಡ, ಜಾಗ್ರತೆ !" ಎಂದಳು.

ಇಂತಹ ಸಮಯದಲ್ಲಿ ಪದ್ಮಾವತಿ ರಾಮಪುರವೆಂಬ ಊರಿನಲ್ಲಿರುವ ಅವಳ ಕಡೆಯ ಬಂಧುಗಳೊಬ್ಬರ ಮನೆಗೆ ಹೋಗಬೇಕಾಗಿ ಬಂತು. ಆ ಊರಿನಲ್ಲಿ ಎರಡು ವರ್ಷಗಳಿಂದ ಮಳೆಬಾರದೆ ಊರವರು ನೀರಿಗೆ ಬಹಳ ಕಷ್ಟ ಪಡುತ್ತಿದ್ದರು.



ಪದ್ಮಾವತಿ ಹೇಳುವ ಜಾಗದಲ್ಲಿ ನೀರು ಬರುತ್ತದೆಂದು ಒಂದು ನಂಬುಗೆ ಈ ಮೊದಲೇ ಉಂಟಾಗಿತ್ತು.

ಆ ಸಂಗತಿಯನ್ನು ತಿಳಿದು ಪದ್ಮಾವತಿ, "ಅಲ್ಲಲ್ಲಿ ಬಾವಿಗಳನ್ನು ತೋಡಿಸಿದರೆ ನೀರಿನ ಕಷ್ಟ ತಗ್ಗದೆ ಹೋಗುತ್ತದೆಯೇ ?" ಎಂದಳು.

"ಅಲ್ಲಲ್ಲಿ ಬಾವಿ ತೋಡಲು ನೋಡಿದೆವು. ಎಲ್ಲಿಯೂ ನೀರಿನ ಒಸರು ಇಲ್ಲ. ಮಳೆಯೇ ಇಲ್ಲದ ಮೇಲೆ ಒಸರು ಎಲ್ಲಿಂದ ಬಂದೀತು ?" ಎಂದರು ಬಂಧುಗಳು.

ಆಗ ಪದ್ಮಾವತಿಯಲ್ಲಿ ಅಡಗಿದ್ದ ಒಂದು ಅದ್ಭುತ ಶಕ್ತಿ ಮೇಲೆದ್ದುಕೊಂಡಿತು.

ಇದ್ದಕ್ಕಿದ್ದ ಹಾಗೆ ಪದ್ಮಾವತಿ ಮನೆಯಿಂದ ಹೊರಗೆ ಹೊರಟಳು. ಭೂಮಿಯೊಳಗೆ ಬೆಲೆ ಬಾಳುವ ನಿಕ್ಷೇಪಗಳೂ, ನೀರಿನ ಸಂಗ್ರಹವೂ ಅವಳಿಗೆ ಕಾಣತೊಡಗಿತು. ಅವಳು ಸುತ್ತುಮುತ್ತಲಿನ ಊರುಗಳಲ್ಲಿ ಸಂಚರಿಸುತ್ತ, ಎಲ್ಲಿ ನಿಕ್ಷೇಪವಿದೆಯೆಂದೂ, ನೀರಿನ ಬುಗ್ಗೆ ಇದೆ ಎಂದೂ ಗ್ರಾಮಸ್ಥರೊಂದಿಗೆ ಹೇಳತೊಡಗಿದಳು. ಮೊದಮೊದಲು ಅವರಿಗೆ ನಂಬುಗೆ ಬಾರದಿದ್ದರೂ, ಪ್ರಯತ್ನಿಸಿ ನೋಡಿದಾಗ ಅವಳು ಹೇಳಿದಂತೆಯೇ ಕಂಡುಬಂತು. ಅದರಿಂದ ಊರುಗಳಲ್ಲಿ ನೀರಿನ ಸಮಸ್ಯೆ ತೊಲಗಿದುದಷ್ಟೇ ಅಲ್ಲದೆ, ಅಷ್ಟೋ ಇಷ್ಟೋ ಬಂಗಾರಗಳ ನಿಧಿ ಕೂಡಾ ದೊರಕಿತು. ಉತ್ಸಾಹದಿಂದ ಕೆಲಸ ನಡೆದು ಅನೇಕ ಬಾವಿಗಳಾಗಿ ನೀರು ತುಂಬಿದುವು.

ಗ್ರಾಮಸ್ಥರಿಗಾದ ಸಂತೋಷಕ್ಕೆ ಪಾರವಿರಲಿಲ್ಲ. ಅವರೆಲ್ಲಾ ಒಂದು ಕಡೆ ಕೂಡಿ, "ಈ ಪದ್ಮಾವತಿ ಸಾಮಾನ್ಯ ಮಾನವ ಸ್ತ್ರೀಯಲ್ಲ. ದೇವಕಾಂತೆಯೇ ನಿಜ. ಗ್ರಾಮಕೇಂದ್ರದಲ್ಲಿ ಇವಳ ಶಿಲಾವಿಗ್ರಹವನ್ನು ಪ್ರತಿಷ್ಠೆ ಮಾಡಿಸಲೇಬೇಕು. ನಮ್ಮ ಗ್ರಾಮಗಳಿಗೆ ಇನ್ನೆಂದೂ ಬರಗಾಲದ ಭಯವಿಲ್ಲ" ಎಂದು ತೀರ್ಮಾನ ಮಾಡಿದರು.

ಆಮೇಲೆ ಗ್ರಾಮದ ಹಿರಿಯನು ವಜ್ರಗುಪ್ತನ ಬಳಿಗೆ ಬಂದು ತಮ್ಮೆಲ್ಲರ ಕೋರಿಕೆಯನ್ನೂ, ತೀರ್ಮಾನವನ್ನೂ ಹೇಳಿದನು.

ಅದನ್ನು ಕೇಳಿ ವಜ್ರಗುಪ್ತನು ಬಹಳ ಸಂತೋಷಪಟ್ಟು, "ಬದುಕಿರುವಾಗಲೇ ಶಿಲಾವಿಗ್ರಹ ಮಾಡಿಸಿಕೊಳ್ಳುವ ಅದೃಷ್ಟ ಸಾಮಾನ್ಯವೇನಲ್ಲ. ಅಪೂರ್ವವೇ ಸರಿ" ಎಂದುಕೊಂಡು ಮಗಳು ಪದ್ಮಾವತಿಯ ವಿಗ್ರಹ ತಯಾರಿಸುವ ಕೆಲಸವನ್ನು ಶಿಲ್ಪಿಯಾದ ಚಂದ್ರಕಾಂತನಿಗೇ ಒಪ್ಪಿಸಿದನು.

ಈ ಸಂಗತಿಯನ್ನೆಲ್ಲ ಕೇಳಿ ವಾಸಂತಿಗೆ ತಂಗಿ ಪದ್ಮಾವತಿಯ ಮೇಲೆ ತಾಳಲಾಗದಷ್ಟು ದ್ವೇಷ ಎದ್ದಿತು. ಅಸೂಯೆಯಾಯಿತು. ಅವಳು ಹಣಕ್ಕಾಗಿ ಎಂತಹ ಕೆಲಸಕ್ಕಾದರೂ ಹಿಂಜರಿಯದ ಕೆಲವು ಮಂದಿ ದುಷ್ಟರನ್ನು ಬರಮಾಡಿಕೊಂಡಳು. ಕೈ ತುಂಬ ಹಣ ಸಿಗುವುದರಿಂದ ಆ ದುಷ್ಟರು ಅವಳು ಹೇಳಿದಂತೆ ಮಾಡಲು ಹೊರಟರು.



ಮುಂದೆ ಎರಡು ತಿಂಗಳ ಮೇಲೆ ರಾಮಪುರದಲ್ಲಿಯೂ ಪರಿಸರದ ಗ್ರಾಮಗಳಲ್ಲಿಯೂ ಕೆಟ್ಟ ಕೆಟ್ಟ ಗಲಾಟೆಗಳು ಪ್ರಾರಂಭವಾದುವು. ಆ ಸಮಯದಲ್ಲಿ ಚಂದ್ರಕಾಂತನು 'ತಯಾರಿಸಿದ ಪದ್ಮಾವತಿಯ ಶಿಲಾವಿಗ್ರಹವು ಗ್ರಾಮಗಳ ಕೇಂದ್ರ ಸ್ಥಾನದಲ್ಲಿ ಪ್ರತಿಷ್ಠೆ ಮಾಡಿಯಾಗಿತ್ತು.

ಇದ್ದಕ್ಕಿದ್ದ ಹಾಗೆ ಎಲ್ಲಿ ನೋಡಿದರೂ ಕಳ್ಳತನಗಳೂ, ಹೊಡೆದಾಟಗಳೂ ನಡೆಯುತ್ತ, ಭಯಭೀತಿಗಳೆದ್ದುವು. ಆ ದುಷ್ಟರಲ್ಲಿ ಒಬ್ಬನು ಬೈರಾಗಿಯ ವೇಷದಲ್ಲಿ ತಿರುಗುತ್ತ, ಈ ಉಪದ್ರಗಳಿಗೆಲ್ಲಾ ಮೂಲ ಕಾರಣವು ಪ್ರತಿಷ್ಠೆ ಮಾಡಿದ ಶಿಲಾವಿಗ್ರಹವೆಂದೂ, ಅದರಿಂದಲೇ ಗ್ರಾಮಕ್ಕೆ ಅರಿಷ್ಟ ಬರಲು ಕಾರಣವೆಂದೂ ಹೇಳತೊಡಗಿದನು. ಆದರಿಂದ ಗ್ರಾಮಗಳಲ್ಲಿ ಭಾರಿ ಕಲಹವೆದ್ದಿತು. ಈ ಸುದ್ದಿ ವಜ್ರಗುಪ್ತನಿಗೂ ತಿಳಿಯಿತು.

ತನ್ನ ಮಗಳ ವಿಗ್ರಹದಿಂದ ಇಷ್ಟೆಲ್ಲ ಕಷ್ಟಗಳು ಬರುವುದನ್ನು ನೋಡಿ ವಜ್ರಗುಪ್ತನಿಗೆ ಬಹಳ ಸಂಕಟವಾಯಿತು. ಅವನು ಚಂದ್ರಕಾಂತನ ಗುರುವಾದ ಶಿಲ್ಪಾಚಾರ್ಯನ ಬಳಿಗೆ ಹೋಗಿ, "ಅಯ್ಯಾ, ತಾವು ಕಳುಹಿಸಿದವನೆಂದು ನಂಬಿ, ಆ ಚಂದ್ರಕಾಂತನನ್ನು ನನ್ನ ಕಲಾಮಂದಿರದ ಶಿಲ್ಪಗಳಿಗೆ ಇರಿಸಿಕೊಂಡೆನು. ಆದರೆ ಅವನ ಶಿಲ್ಪಗಳಲ್ಲಿ ಲೋಪಗಳಿವೆಯೆಂದು ಊರೊಳಗಿನ ದುಷ್ಟ ಸಂಭವಗಳಿಂದ ಗೊತ್ತಾಗುತ್ತಾ ಇದೆ. ಏಕೆಂದರೆ ನನ್ನ ಮಗಳು ಪದ್ಮಾವತಿ ಸುಗುಣಗಳ ಖನಿ. ಅವಳ ಶಿಲ್ಪದಿಂದ ದುಷ್ಪರಿಣಾಮಗಳು ಬರುತ್ತವೆಂದರೆ ಶಿಲ್ಪ ರಚನೆಯಲ್ಲೇ ಲೋಪವಿದೆಯೆಂದಾಗುತ್ತದೆ. ಇದಕ್ಕೇನೆನ್ನುವಿರಿ ?" ಎಂದು ಕೇಳಿದನು.

ವಜ್ರಗುಪ್ತನು ಹೇಳಿದುದನ್ನು ಕೇಳಿ, ಶಿಲ್ಪಾಚಾರ್ಯನು ಆಶ್ಚರ್ಯಪಟ್ಟು, "ನನ್ನ ಶಿಷ್ಯರೊಳಗೆಲ್ಲಾ ಚಂದ್ರಕಾಂತನು ಬಹಳ ಉತ್ತಮನು. ಗಟ್ಟಿಗನು. ಒಳ್ಳೆಯ ಪ್ರತಿಭಾಶಾಲಿ. ಅವನ ಶಿಲ್ಪಗಳಲ್ಲಿ ಲೋಪವೆಂದರೆ ಆಶ್ಚರ್ಯವಾಗುತ್ತದೆ" ಎಂದು ಅವನು ಆಗಲೇ ಹೊರಟು, ಪದ್ಮಾವತಿಯನ್ನು ಕೂಡಾ ಕರೆದುಕೊಂಡು ರಾಮಪುರಕ್ಕೆ ಹೋಗಿ, ಅವಳ ವಿಗ್ರಹವನ್ನೂ ಅವಳನ್ನೂ ಹೋಲಿಸಿ ನೋಡಿ, "ವಜ್ರಗುಪ್ತಾ, ನೀನು ಹೇಳಿದ್ದು ನಿಜವೇ. ಈ ಶಿಲ್ಪದಲ್ಲಿ ಲೋಪವಿದೆ. ಪದ್ಮಾವತಿಯ ರೂಪಕ್ಕೂ ಈ ಶಿಲ್ಪಕ್ಕೂ ಕೆಲವು ವ್ಯತ್ಯಾಸಗಳಿವೆ" ಎಂದು ಚಂದ್ರಕಾಂತನನ್ನು ಕರೆಯಿಸಲು ಹೇಳಿದನು.

ಚಂದ್ರಕಾಂತನು ಬಂದಾಗ ಶಿಲ್ಪಾಚಾರ್ಯನು ಅವನನ್ನು ತೀವ್ರವಾಗಿ ನೋಡುತ್ತ, "ನೀನು ಗುರುವಾದ ನನಗೆ ಒಳ್ಳೆಯ ಕೀರ್ತಿ ತರುವಿ ಎಂದು ಅಂದುಕೊಂಡಿದ್ದೆ. ಆದರೆ ಶಿಲ್ಪಗಳನ್ನು ಇಷ್ಟೊಂದು ಲೋಪಗಳಿಂದ ಕೆತ್ತಿದೆ ಏಕೆ? ಹೀಗೆ ಮಾಡುವಿ ಎಂದು ನಾನು ಅಂದುಕೊಳ್ಳಲಿಲ್ಲ." ಎಂದನು.

ಚಂದ್ರಕಾಂತನು ವಿನಯದಿಂದ ಗುರುವಿಗೆ ನಮಸ್ಕರಿಸಿ, "ಅಯ್ಯಾ, ಲೋಪವು ನನ್ನ ವಿದ್ಯೆಯ

ದಲ್ಲ. ನಾನು ಕೆತ್ತಿದ್ದು ಪದ್ಮಾವತಿಯ ಶಿಲಾವಿಗ್ರಹ ವಲ್ಲ, ವಾಸಂತಿಯದು " ಎಂದನು.

" ಹಾಗೇಕೆ ಮಾಡಿದಿ?" ಎಂದು ಶಿಲ್ಪಾಚಾರ್ಯನು ಕೇಳಿದನು.

" ತನ್ನ ತಂಗಿಯ ಶಿಲಾವಿಗ್ರಹವು ಪ್ರತಿಷ್ಠಿ ಸಲ್ಪಡುವ ಸಂಗತಿ ತಿಳಿದು ವಾಸಂತಿಗೆ ಸಹಿಸಲಾಗ ಲಿಲ್ಲ. ಅವಳ ಸಂಕಟ ನೋಡಿ ನನಗೂ ಸಹಿಸಲಾಗ ಲಿಲ್ಲ. ಅದಕ್ಕೆ ಕಾರಣ ನನ್ನ ಮನಸ್ಸು ಅವಳಲ್ಲೇ ಸಂಲಗ್ನವಾಗಿತ್ತು. ಅಕ್ಕತಂಗಿಯರ ರೂಪದಲ್ಲಿ ಹೆಚ್ಚೇನೂ ವ್ಯತ್ಯಾಸವಿಲ್ಲದ್ದರಿಂದ, ಶಿಲ್ಪದಲ್ಲಿ ಅದನ್ನು ಯಾರೂ ಕಂಡು ಹಿಡಿಯಲಿಕ್ಕಿಲ್ಲವೆಂದುಕೊಂಡು ನಾನು ವಾಸಂತಿಯ ವಿಗ್ರಹವನ್ನೇ ತಯಾರಿಸಿ ಬಿಟ್ಟೆನು. ನನಗೆ ತಿಳಿಯದಂತೆಯೇ ಹಾಗಾಯಿತು. ಇದನ್ನು ವಾಸಂತಿಗೆ ಸಹಾ ನಾನು ಹೇಳಲಿಲ್ಲ. ಆದರೆ ಅಸೂಯಾಪರಳ ವಿಗ್ರಹ ಪ್ರತಿಷ್ಠೆಯಿಂದ ಗ್ರಾಮಗಳಿಗೆ ಕೆಡುಕಾಗುತ್ತದೆಂದು ನನಗೆ ಗೊತ್ತಿರ ಲಿಲ್ಲ. ಕ್ಷಮಿಸಬೇಕು " ಎಂದು ಚಂದ್ರಕಾಂತನು ಗುರುವಿನ ಪಾದಗಳಿಗೆ ಪ್ರಣಾಮ ಮಾಡಿದನು.

ನಡೆದ ಸಂಗತಿ ವಾಸಂತಿಗೆ ಗೊತ್ತಾಯಿತು. ತನ್ನ ಅಸೂಯೆಯೂ ದ್ವೇಷವೂ ಎಲ್ಲರಲ್ಲಿಯೂ ತನಗೆ ಕೆಟ್ಟ ಹೆಸರು ಬರುವಂತಾಯಿತೆಂದು ತಿಳಿದು, ಪಶ್ಚಾತ್ತಾಪದಿಂದ ಪದ್ಮಾವತಿಯ ಬಳಿಗೆ ಹೋಗಿ, " ತಂಗೀ, ನಾನು ಅಸೂಯಾದ್ವೇಷಗಳನ್ನು ಬಿಟ್ಟು ಒಳ್ಳೆಯ ದಾರಿಯಲ್ಲಿ ನಡೆಯದೆ ಹೋದರೆ ಇಡೀ ದೇಶಕ್ಕೇ ಕಷ್ಟಗಳು ಬರಬಹುದು. ಈ ದಿನದಿಂದ ನೀನು ಹೇಳಿದ ಹಾಗೇ ನಾನು ನಡೆಯುತ್ತೇನೆ. ನನ್ನನ್ನು ಒಳ್ಳೇ ದಾರಿಯಲ್ಲಿ ನೀನೇ ನಡೆಸಬೇಕು " ಎಂದಳು ಗದ್ಗದಿತಳಾಗಿ.

ಮಗಳ ಪ್ರವರ್ತನೆಯಲ್ಲಿ ಬಂದ ಒಳ್ಳೆಯ ಬದಲಾವಣೆಯನ್ನು ನೋಡಿ ವಜ್ರಗುಪ್ತನು ಬಹಳ ಸಂತೋಷಪಟ್ಟು, ಚಂದ್ರಕಾಂತನನ್ನು ಕ್ಷಮಿಸಿದನು. ಅಷ್ಟೇ ಅಲ್ಲ, ವಾಸಂತಿ ಕಠಿಣ ಗುಣದವಳೆಂದು ತಿಳಿದೂ ಸಹ, ಅವಳನ್ನು ಪ್ರೇಮಿಸುವ ಚಂದ್ರ ಕಾಂತನಿಗೆ ಅವಳನ್ನು ಕೊಟ್ಟು ಮದುವೆ ಕೂಡಾ ಮಾಡಿದನು.

ಚಂದ್ರಕಾಂತನೊಂದಿಗೆ ವಿವಾಹವಾದ ಮೇಲೆ ವಾಸಂತಿ ಹತ್ತಿರವೇ ಇದ್ದು, ಗಂಡನಿಂದ ಪದ್ಮಾವತಿಯ ಶಿಲಾವಿಗ್ರಹವನ್ನು ತಯಾರು ಮಾಡಿಸಿ, ರಾಮಪುರ ದಲ್ಲಿ ಪ್ರತಿಷ್ಠೆ ಮಾಡಿಸಿದಳು.

ವಾಸಂತಿಯಲ್ಲಿ ಬಂದ ಒಳ್ಳೆಯ ಬದಲಾವಣೆಗೆ ಚಂದ್ರಕಾಂತನೇ ಕಾರಣವೆಂದು ತಿಳಿದವರೆಲ್ಲಾ " ಚಂದ್ರಕಾಂತನು ಮನುಷ್ಯರನ್ನು ಶಿಲಾವಿಗ್ರಹವಾಗಿ ಮಾಡುತ್ತಾನೆ. ಹಾಗೆಯೇ ಶಿಲಾವಿಗ್ರಹಗಳನ್ನು ಮನುಷ್ಯರಾಗಿಯೂ ಮಾಡಬಲ್ಲನು !" ಎನ್ನುತ್ತಿದ್ದರು.






ಒಂದು ಊರಿನಲ್ಲಿ ಒಬ್ಬ ಮನೆಯ ಯಜಮಾನನಿದ್ದ. ಅವನ ಹೆಂಡತಿಗೂ, ಮಗನಿಗೂ, ಮಗಳಿಗೂ ಅವನು ಯಜಮಾನ. ಅಷ್ಟೇ ಹೊರತು ಬೇರೆ ದೊಡ್ಡ ಯಜಮಾನಿಕೆ ಅವನಿಗಿರಲಿಲ್ಲ. ಕಾಲಕ್ರಮದಲ್ಲಿ ಮಗನಿಗೆ ಮದುವೆಯಾದುದರಿಂದ ಸೊಸೆಯೊಬ್ಬಳು ಮನೆಗೆ ಬಂದಳು. ಅದರಿಂದ ಮನೆಯೊಳಗೆ ಮೂವರು ಹೆಂಗುಸರಾದರು.

"ಮೂವರು ಹೆಂಗುಸರಿದ್ದಲ್ಲಿ ಮೂರು ಲೋಕಗಳೂ ತಿರುಗುತ್ತವೆ" ಎಂದೇನೋ ಸಾಮತಿ. ಅಲ್ಲಿ ಹಾಗೇನೂ ನಡೆಯದಿದ್ದರೂ ಸ್ವಲ್ಪ ಸ್ವಲ್ಪ ಹೊರಗಿನವರ ಲಕ್ಷ್ಯ ಸೆಳೆಯುವ ಹಾಗೆ ಒಮ್ಮೊಮ್ಮೆ ಜೋರಿನ ಮಾತುಗಳು ಕೇಳುತ್ತಿದ್ದುವು. ಆ ಮನೆಯಲ್ಲಿರುವ ಇಬ್ಬರು ಗಂಡಸರು ಕೆಲಸಕ್ಕೆ ಹೋದ ಮೇಲೆ, ಮತ್ತಿಬ್ಬರು ಹೆಂಗುಸರು ತಾಯಿ ಮಗಳು ಆದುದರಿಂದ, ಸೊಸೆಯೇ ಹೊರಗಿನಿಂದ ಬಂದವಳಾಗುತ್ತಾಳೆ. ಅವಳ ತೌರಿನ ರೀತಿನೀತಿಗಳಿಗೂ ಇಲ್ಲಿಯ ರೀತಿನೀತಿಗಳಿಗೂ ವ್ಯತ್ಯಾಸವಿದ್ದಿತು. ಆದುದರಿಂದ ಆ ಹುಡುಗಿಯನ್ನು ತಮ್ಮ ಪದ್ಧತಿಗೆ ಮಾರ್ಪಡಿಸಲು ತಾಯಿಯೂ ಮಗಳೂ ಬಹಳ ಶ್ರಮಪಡತ್ತಿದ್ದರು. ಒಮ್ಮೆ ಹೇಳಿದರೆ ಅವಳಿಗೆ ಗೊತ್ತಾಗುವುದಿಲ್ಲವೆಂದು ಭಾವಿಸಿ ಪದೇ ಪದೇ ಹೇಳುತ್ತಿದ್ದರು.

ಒಂದು ದಿನ ಆ ಮನೆಗೆ ಯಜಮಾನನ ಬಾವಯ್ಯನು ನೆಂಟನಾಗಿ ಬಂದನು. ಅಡಿಗೆ ಪದಾರ್ಥ ಸ್ವಲ್ಪ ಚೆನ್ನಾಗಿರುವ ಹಾಗೆ ನೋಡಿಕೊಳ್ಳಬೇಕಾಗಿತ್ತು. ಯಜಮಾನಿನಿ ಪ್ರತಿಯೊಂದರಲ್ಲೂ ಜಾಗ್ರತೆ ವಹಿಸತೊಡಗಿದಳು.

ಅವಳು ಬಿಂದಿಗೆ ಎತ್ತಿಕೊಂಡು ಬಾವಿಯ ಕಡೆಗೆ ಹೋಗುತ್ತ, ಬಟ್ಟೆ ಒಗೆಯುತ್ತಿದ್ದ ಸೊಸೆಯನ್ನು ನೋಡಿ, "ನೋಡೇ, ಒಲೆಯ ಮೇಲೆ ಹುಳಿಗೆ ಹೋಳು ಬೇಯುತ್ತಾ ಇದೆ. ಮುಕ್ಕಾಲುವಾಸಿ ಬೆಂದ ಮೇಲೆ ಉಪ್ಪು ಹಾಕು, ಮೊದಲು ಹಾಕಿಬಿಡಬೇಡ. ಹಾಗೆ ಹಾಕಿದರೆ ಹೋಳು ಬೇಯಲಾರದು. ನಾನು ಗಿಡಗಳಿಗೆ ನೀರು ಹಾಕಿ ಬೇಗ ಬರುತ್ತೇನೆ" ಎಂದು ಹೇಳಿಹೋದಳು.

ಕೈಯಲ್ಲಿದ್ದ ಕೆಲಸ ಮುಗಿಸಿದ ಕೂಡಲೇ ಸೊಸೆ ಒಲೆಯಲ್ಲಿದ್ದ ಪಾತ್ರವನ್ನು ಮಗುಚಿ ನೋಡಿ, ಉಪ್ಪು ಹಾಕಿ, ಬಟ್ಟೆಯನ್ನು ಒಣಗಿಸಲು ಹೊರಗೆ ಹೋದಳು.

ತಾಯಿ ಹೇಳಿದ ಮಾತು ಗೋಡೆ ಹತ್ತಿರ ಬೆರಣಿ ತಟ್ಟುತ್ತಿದ್ದ ಮಗಳ ಕಿವಿಗೂ ಬಿದ್ದಿತ್ತು. ಅದು ತಾಯಿ ತನಗೆ ಹೇಳಿದ್ದೆಂದೇ ಅವಳೂ ಅಂದು ಕೊಂಡಳು.

ಮತ್ತೆ ಸ್ವಲ್ಪ ಹೊತ್ತಿಗೆ ಮಗಳು ಬೇಗಬೇಗನೇ ಬಂದು, "ಅತ್ತಿಗೆಗೆ ಮರೆವು ಜಾಸ್ತಿ. ಉಪ್ಪು ಹಾಕಲಿಕ್ಕೆ ನನಗೇ ಹೇಳಿದ್ದು. ಅತ್ತಿಗೆ ಇನ್ನೂ ಒಳಗೇ ಬಂದಿಲ್ಲ" ಎಂದು ಗಟ್ಟಿಮಾಡಿಕೊಂಡು ಹುಳಿಯ ಪಾತ್ರಕ್ಕೆ ಒಂದು ಮುಷ್ಟಿ ಉಪ್ಪು ತಾನೇ ಹಾಕಿದಳು.

"ಆ ಪೆದ್ದು ಹುಡುಗಿ ಹುಳಿಗೆ ಉಪ್ಪು ಹಾಕಲು ಮರೆತೇ ಹೋಗುತ್ತಾಳೆ. ಸಮಯ ನೋಡಿ ಉಪ್ಪು ಹಾಕದಿದ್ದರೆ ಹೋಳು ಪೂರಾ ಕರಗಿ ಹೋಗುತ್ತದೆ. ಅಣ್ಣಯ್ಯ ಬೇರೆ ಬಂದಿದ್ದಾನೆ. ಅವನಿಗೆ ಎಲ್ಲಾ ಚೆನ್ನಾಗಿರಬೇಕು" ಎಂದುಕೊಂಡು ಅತ್ತೆಯಾದವಳು ಬೇಗಬೇಗ ಬಂದಳು. ಅಡಿಗೇ ಮನೆಯಲ್ಲಿ ಯಾರೂ ಇಲ್ಲದ್ದು ನೋಡಿ, "ಅಂದುಕೊಂಡ ಹಾಗೇ ಆಯ್ತು! ನಾನೇ ಹತ್ತಿರವಿದ್ದು ಮಾಡಿ ಮುಗಿಸುತ್ತೇನೆ" ಎಂದು ಕೊಂಡು, ಉಪ್ಪಿನ ಜಾಡಿಯಿಂದ ಒಂದು ಮುಷ್ಟಿ ಉಪ್ಪು ತೆಗೆದು ಒಲೆಯ ಪಾತ್ರಕ್ಕೆ ಹಾಕಿ, ಉಳಿದ ಕೆಲಸಕ್ಕೆ ಕುಳಿತಳು.

ಮಧ್ಯಾಹ್ನ ಯಜಮಾನನೂ ಮಗನೂ ಬಂದ ಬಾವನೆಂಟನೂ ಎಲ್ಲಾ ಊಟಕ್ಕೆ ಕುಳಿತರು. ಬಾವನೆಂಟನು ಮೊದಲು ಹುಳಿಯನ್ನ ಕಲಸಿ ಬಾಯಿಗಿಟ್ಟು, "ಇದೇನಪ್ಪ! ಉಪ್ಪು ಹಾಕುವುದು ಮರೆತೇ ಹೋಯ್ತು?" ಎಂದನು ಮೋರೆ ಕಹೀ ಮಾಡಿಕೊಂಡು.

"ಅದೇನಣ್ಣ? ನಾನೇ ಹುಳಿಗೆ ಉಪ್ಪು ಹುಳಿ ಎಲ್ಲಾ ಹಾಕಿದ್ದು" ಎಂದಳು ಆಶ್ಚರ್ಯದಿಂದ ತಾಯಿ.

"ನಾನು ಮರೆಯದೆ ಹಾಕಿದ್ದೇನಮ್ಮ. ಮಾವಯ್ಯನಿಗೆ ಕಡಿಮೆಯಾಯ್ತೋ ಏನೋ!" ಎಂದಳು ಮಗಳು.

"ನೀವು ಹೇಳಿದ್ದು ನೆನಪಿಟ್ಟು ನಾನು ಉಪ್ಪು ಹಾಕಿದ್ದು ಕೂಡಾ ಚೆನ್ನಾಗಿ ನೆನಪಿದೆ. ಆಮೇಲೆ ಅತ್ತೆಯೇ ಅಡಿಗೆ ಮಾಡ್ತಾ ಇದ್ದರು. ನಾನು ಒಳಗೆ ಬರಲೇ ಇಲ್ಲ. ಉಪ್ಪು ಮಾತ್ರ ಹಾಕಿದೆ" ಎಂದಳು ಸೊಸೆ ಸಣ್ಣ ದನಿಯಿಂದ.

"ಹಾ, ಹಾ! ಗೊತ್ತಾಯ್ತು! ಅದಕ್ಕೇ ಇದು ಉಪ್ಪಿನ ಕಷಾಯವಾಗಿದೆ" ಎಂದನು ಭಾವನೆಂಟ ಬಾಯಿ ಬಿಟ್ಟು ನಗುತ್ತಾ.

ಮನೆಯೊಳಗಿನ ಹೆಂಗುಸರೊಳಗೆ, ಈ ಬಗೆಯ ಐಕಮತ್ಯವಿರುವುದನ್ನು ನೋಡಿ ಯಜಮಾನನಿಗೆ ಕೋಪ ಬಂತು. "ಇನ್ನು ಮೇಲೆ ಅವರವರ ಕೆಲಸ ಅವರವರೇ ಮಾಡಬೇಕು! ಇನ್ನೊಬ್ಬರಿಗೆ ಹೇಳ ಕೂಡದು!" ಎಂದು ಗರ್ಜಿಸಿ ಹೇಳಿದನು.





# ಶಿವಪುರಾಣ

ರತೀದೇವಿ ಹೇಳಿಕೊಂಡ ದೈನ್ಯತೆಯ ಪ್ರಾರ್ಥನೆಯನ್ನು ಆಲಿಸಿದ ಶಿವನು, ಅವಳನ್ನು ದಯಾರ್ದ್ರತೆಯಿಂದ ನೋಡಿ, "ರತೀ, ದುಃಖಿಸಬೇಡ. ಮನ್ಮಥನು ಬ್ರಹ್ಮನ ಶಾಪದ ಕಾರಣದಿಂದಲೇ ಹೀಗೆ ಭಸ್ಮನಾಗಿದ್ದಾನೆ. ಹಿಂದೆ ಅವನು ಹೀಗೆಯೇ ಬ್ರಹ್ಮನನ್ನು ಕೂಡಾ ಹೂಬಾಣಗಳಿಂದ ಹೊಡೆದು, ಅವನಿಗೆ ಮಗಳ ಮೇಲೆ ಮೋಹ ಬರುವ ಹಾಗೆ ಮಾಡಿ ಅವನ ಶಾಪಕ್ಕೆ ಗುರಿಯಾದನು. ಅವನು ದೇಹದೊಂದಿಗಿದ್ದರೆ ಲೋಕದ ಮಿತಿ ಮೇರೆ ಮೀರಿ ಹೋಗುವುದೆಂತಲೇ ಅಂತಹ ಶಾಪಕ್ಕೆ ಕಾರಣವಾಯಿತು. ನಾನು ನಿನ್ನ ಪಾತಿವ್ರತ್ಯಕ್ಕೆ ಭಂಗ ಬರುವಂತೆ ಮಾಡುವುದಿಲ್ಲ. ಮನ್ಮಥನು ಲೋಕಕ್ಕೆ ಶರೀರವಿಲ್ಲದವನಾದರೂ ನಿನಗೆ ಮಾತ್ರ ಶರೀರದೊಂದಿಗೇ ಕಾಣುತ್ತಿರುತ್ತಾನೆ. ಇದೋ ಈಗಲೇ ಅವನಿಗೆ ಪ್ರಾಣ ಕೊಡುತ್ತೇನೆ" ಎಂದನು.

ಹೀಗೆ ರತಿಯನ್ನು ಸಂತೋಷಪಡಿಸಿ ಕಳುಹಿಸಿದ ಮೇಲೆ ಶಿವನು ತಪಸ್ಸನ್ನು ಬಿಟ್ಟು ಕೈಲಾಸದಲ್ಲಿ ತನ್ನ ರುದ್ರ ಗಣಗಳೊಂದಿಗೆ ಒಡ್ಡೋಲಗ ನಡೆಸಿ ಫಾಲಾಗ್ನಿಯನ್ನು ಕರೆದು, "ಅಗ್ನಿಯೇ, ಇನ್ನು ಮುಂದೆ ನೀನು ಹೊರಗೆಲ್ಲಿಯೂ ಕಾಣಿಸಬಾರದು. ವೃಕ್ಷಗಳೊಳಗೂ, ಪರ್ವತಗಳಲ್ಲಿಯೂ ಸಮುದ್ರದ ಗರ್ಭದೊಳಗೂ ಅಡಗಿಕೊಂಡಿರಬೇಕು" ಎಂದು ಆದೇಶ ಮಾಡಿ ಕಳುಹಿಸಿದನು.

ಶಿವನು ತಪಸ್ಸು ಮುಗಿಸಿ ಎದ್ದುದನ್ನು ನೋಡಿ, ದೇವತೆಗಳೊಂದಿಗೆ ದೇವೇಂದ್ರನು ಬಂದು ಶಿವನಿಗೆ ನಮಸ್ಕಾರ ಮಾಡಿ ಹೊರಟುಹೋದನು. ಈಗಾಗಲೇ ಮನ್ಮಥನ ಹೂಬಾಣಗಳು ಪರಿಣಾಮವಾಗಿದ್ದುವು. ಶಿವನ ಮನಸ್ಸು ಪಾರ್ವತಿಯ ಮೇಲೆ ಸಂಲಗ್ನವಾಗಿತ್ತು. ಅವಳನ್ನು ವಿವಾಹ ಮಾಡಿಕೊಳ್ಳಬೇಕೆಂಬ ನಿಶ್ಚಯಕ್ಕೆ ಬಂದನು ಶಿವ.

ತಪಸ್ಸಿನಲ್ಲಿದ್ದ ಶಿವನು ಒಮ್ಮೆಗೇ ಕಣ್ಣು ತೆರೆದು ವನವನ್ನೂ, ಮನ್ಮಥನನ್ನೂ ಸುಟ್ಟುಹಾಕಿದುದನ್ನು ಪ್ರತ್ಯಕ್ಷ ನೋಡಿದ ಪಾರ್ವತಿ, ಹೆದರಿ ತನ್ನ ಗೆಳತಿಯರೊಂದಿಗೆ ಓಡುತ್ತಾ ಮನೆಗೆ ಹೋಗಿ ಸೇರಿ

## ೫. ಪಾರ್ವತಿಯ ತಪಸ್ಸು



ಕೊಂಡಳು. ನಡೆದುದನ್ನೆಲ್ಲಾ ಕೇಳಿ ಮೇನಕಾ ಹಿಮವಂತರು ಬಹಳವಾಗಿ ಬೆಚ್ಚಿಬಿದ್ದರು. ತಮ್ಮ ಕುಮಾರಿ ಪುನರ್ಜನ್ಮವೆತ್ತಿ ಬಂದಳೆಂದು ಭಾವಿಸಿಕೊಂಡರು. ಅವರು ಪಾರ್ವತಿಗೆ ದೃಷ್ಟಿ ಸುತ್ತಿಹಾಕಿ, ಧೈರ್ಯ ಬರುವಂತೆ ಸಮಾಧಾನ ಹೇಳಿ ಅವಳ ಭಯವನ್ನು ಹೋಗಲಾಡಿಸಿದರು.

ಭಯವಳಿದರೂ ಪಾರ್ವತಿ ಶಿವನನ್ನು ಮಾತ್ರ ಮರೆಯಲಿಲ್ಲ. ಅವನ ರೌದ್ರ ಪ್ರಭಾವವನ್ನು ನೆನೆದಂತೆ, ಬಹು ದೊಡ್ಡ ಮಹನೀಯನಾಗಿ ಇನ್ನಷ್ಟು ಆಳವಾಗಿ ಅವಳ ಮನಸ್ಸಿನಲ್ಲಿ ಬೇರೂರಿದನು. ಅಂತೆಯೇ ವಿರಹ ವೇದನೆಯನ್ನು ಅನುಭವಿಸ ತೊಡಗಿದಳು ಪಾರ್ವತಿ. ಅವಳಿಗೆ ಶಿವನ ಧ್ಯಾನದ ಹೊರತು ಮತ್ತೇನೂ ಬೇಕಿರಲಿಲ್ಲ. ನಿದ್ರಾಹಾರಗಳನ್ನು ಬಿಟ್ಟು, ತಪಿಸುವ ತಮ್ಮ ಮಗಳನ್ನು ನೋಡಿ ಮೇನಕಾ ಹಿಮವಂತರು, "ಸ್ವಲ್ಪ ನಿಧಾನಿಸಮ್ಮಾ, ಶಿವನು ಈಗತಾನೇ ತಪಸ್ಸಿನಿಂದ ಎದ್ದಿದ್ದಾನೆ. ಸಮಯ ಸಂದರ್ಭ ನೋಡಿ ನಿನ್ನ ಮದುವೆಯನ್ನು ಶಿವನೊಂದಿಗೆ ಮಾಡಿಸುತ್ತೇವೆ" ಎಂದು ಸಮಾಧಾನ ಹೇಳಿದರು.

ಆಮೇಲೆ ಪಾರ್ವತಿ ನಾರದನು ಹೇಳಿದ ಪ್ರಕಾರ ಶಿವಪಂಚಾಕ್ಷರಿಯನ್ನು ಜಪಿಸುತ್ತ, ಶಿವನ ಧ್ಯಾನದಲ್ಲೇ ಲೀನಳಾದಳು. ಪಾರ್ವತಿ ತನ್ನ ಗೆಳತಿಯರನ್ನು ಕರೆದುಕೊಂಡು, ಶೃಂಗತೀರ್ಥಕ್ಕೆ ಹೋಗಿ, ಅಲ್ಲಿ ಪಂಚಾಕ್ಷರೀ ಮಹಾ ಮಂತ್ರವನ್ನು ಜಪಿಸುತ್ತ ತೀವ್ರವಾದ ತಪಸ್ಸು ಮಾಡಿಕೊಂಡಿದ್ದಳು. ಅದೆಷ್ಟು ತೀವ್ರವೆಂದರೆ, ಅವಳು ಒಂದು ಎಲೆಯನ್ನು ಸಹಾ ತಿನ್ನದೆ ತಪಸ್ಸು ಮಾಡುವುದನ್ನು ನೋಡಿ, ಅಲ್ಲಿರುವ ಮುನಿಗಳು ತುಂಬಾ ಆಶ್ಚರ್ಯಪಡುತ್ತ ಅವಳನ್ನು "ಅಪರ್ಣಾ" ಎಂದು ಸಂಬೋಧಿಸ ತೊಡಗಿದರು.

ಒಂದು ದಿನ ಮೇನಕಾ ಹಿಮವಂತರು ತಮ್ಮ ಕುಮಾರಿಯನ್ನು ನೋಡಲು ಬಂದು, "ಅಮ್ಮಾ, ಆಹಾರವೇನೂ ತೆಗೆದುಕೊಳ್ಳದೆ ಇಷ್ಟೊಂದು ಘೋರವಾದ ತಪಸ್ಸನ್ನು ಏಕೆ ಮಾಡುವಿ? ಮನ್ಮಥನನ್ನು ಮಸಿಮಾಡಿದ ಶಿವನು ನಿನ್ನನ್ನು ಅನುಗ್ರಹಿಸುವನೆಂಬುದರಲ್ಲಿ ಸಂದೇಹಿಸುವಿಯಾ? ಅವನು ಮುಂಗೋಪಿಯೆಂದೂ, ದಯಾಹೀನನೆಂದೂ ಭಾವಿಸಿಕೊಂಡು ಹೀಗೆ ತಪಸ್ಸು ಮಾಡುವಿಯಾ? ಯಾವುದಕ್ಕೂ ಮಿತಿ ಬೇಕಮ್ಮ. ಚಿಕ್ಕ ಹುಡುಗಿಯಾದ ನೀನು ಇಷ್ಟೊಂದು ತೀವ್ರತೆ ವಹಿಸಬಾರದಮ್ಮ. ಏಳು, ಮನೆಗೆ ಬಾ" ಎಂದರು.

ಪಾರ್ವತಿ ಅವರ ಮಾತುಗಳನ್ನು ಕೇಳಿ, "ಮೊದಲು ನೀವು ನನಗೆ ಏನು ಹೇಳಿದಿರಿ? ಶಿವನಿಗೆ ನನ್ನನ್ನು ಕೊಟ್ಟು ಮದುವೆ ಮಾಡುತ್ತೇವೆಂದಿದ್ದೀರಿ. ನನಗೆ ಅವನ ಮೇಲೆ ನೀವು ಹೇಳುವ ಸಂದೇಹವೇನೂ ಇಲ್ಲ. ನಿಮ್ಮ ಮಾತನ್ನು ಆದಷ್ಟು ಬೇಗ ನಿಜಪಡಿಸಲಿಕ್ಕಾಗಿಯೇ ನಾನು ಪ್ರಯತ್ನಿಸುತ್ತಿದ್ದೇನೆ.

ಪುತ್ರೀ ಮೋಹದಿಂದ ನೀವು ಚಂಚಲರಾಗದೆ ನನ್ನ ಚಿಂತೆಯನ್ನು ಬಿಟ್ಟು, ಮನೆಗೆ ಹೋಗಿ, ಸುಖವಾಗಿ ಕಾಲ ನಿರೀಕ್ಷೆ ಮಾಡಿಕೊಂಡಿರಿ" ಎಂದು ತಾಯಿ ತಂದೆಯರೊಂದಿಗೆ ಹೇಳಿದಳು.

ಇಷ್ಟರಲ್ಲಿ ಶಿವನು ಪಾರ್ವತಿಯನ್ನು ಹೇಗೆ ಮದುವೆಯಾಗುವುದೆಂದು ಆಂದೋಳನೆ ಪಡುತ್ತ, ಯಾರೊಡನೆ ಹೇಳುವುದೆಂದು ಆಲೋಚಿಸಿಕೊಂಡಿದ್ದನು. ಆಗ ಬ್ರಹ್ಮ, ವಿಷ್ಣು, ದೇವೇಂದ್ರರು ಶಿವನ ಬಳಿಗೆ ಬಂದು, "ದೇವಾ ಮಹೇಶ್ವರಾ! ಇನ್ನು ತಡಮಾಡದೆ ಪಾರ್ವತಿಯನ್ನು ಮದುವೆಯಾಗಿ, ಲೋಕಗಳಿಗೆ ಒಳಿತು ಮಾಡಬೇಕಾಗಿದೆ. ನಿನಗೆ ಹುಟ್ಟುವ ಮಗನಿಂದ ಹೊರತು ಬೇರೆ ರೀತಿಯಲ್ಲಿ ಮರಣವಿಲ್ಲದಂತೆ ವರಪಡೆದ ತಾರಕನಿಂದ ಲೋಕಗಳು ತಪಿಸಿಕೊಂಡಿವೆ. ಅವನು ಸತ್ತರೆ ಹೊರತು ಲೋಕಗಳಿಗೆ ಸುಖವಾಗದು. ಆದುದರಿಂದ ಬೇಗನೆ ನೀನು ಪಾರ್ವತಿಯನ್ನು ವರಿಸು" ಎಂದು ಕೇಳಿಕೊಂಡರು.

ಆ ಮಾತುಗಳನ್ನು ಕೇಳಿ ಶಿವನು ತನ್ನೊಳಗೆ ಸಂತೋಷಪಟ್ಟರೂ, ಅದನ್ನು ತೋರಗೊಡದೆ, "ಮದುವೆಯಾದರೆ ತಪಸ್ಸು ಸರಿಯಾಗಿ ಸಾಗಲಾರದು. ಮನ್ಮಥನನ್ನು ಜಯಿಸಬಹುದಾದರೂ, ಸ್ತ್ರೀಯರ ಕಣ್ಣಿನ ಬಾಣಗಳನ್ನು ತಡೆದುಕೊಳ್ಳುವುದು ಬಹಳ ಕಷ್ಟ. ಪಾರ್ವತಿಯೊಂದಿಗೆ ಗೃಹಸ್ಥಾಶ್ರಮದಲ್ಲಿರುವುದಕ್ಕಿಂತಲೂ ನನ್ನ ಪಾಡಿಗೆ ತಪಸ್ಸಿನಲ್ಲಿ ನೆಮ್ಮದಿಯಾಗಿರುವುದೇ ಒಳ್ಳೆಯದೆಂದು ಸಂಕಲ್ಪಿಸಿದ್ದೇನೆ" ಎಂದನು.

ಆ ಮಾತಿಗೆ ಬ್ರಹ್ಮನೇ ಮೊದಲಾದವರು ಒಪ್ಪಿಕೊಳ್ಳದೆ, ಗೃಹಸ್ಥಾಶ್ರಮವೇ ದೊಡ್ಡದೆಂದೂ, ಹೆಂಡತಿ ಇಲ್ಲದ ಏಕಾಂಗಿಯನ್ನು ಯಾರೂ ಗೌರವಿಸಲಾರರೆಂದೂ, ಶಿವನು ಗೃಹಸ್ಥನಾಗಿದ್ದರೇನೇ, ಗೃಹಸ್ಥಾಶ್ರಮದಲ್ಲಿ ರಾಜಯೋಗಿಯಾಗಿದ್ದರೇನೇ,



ಲೋಕಗಳಿಗೆ ಒಳಿತಾಗುವುದೆಂದೂ, ತ್ರಿಮೂರ್ತಿಗಳ ಮೂಲ ಕಾರ್ಯಗಳು ಸುಗಮವಾಗಿ ಸಾಗಲು ಶಿವನು ವಿವಾಹವಾಗಲೇಬೇಕೆಂದೂ ವಿವರಿಸಿ ಹೇಳಿದರು.

ಆಮೇಲೆ ಶಿವನು ಅವರು ಹೇಳಿದಂತೆಯೇ ಮಾಡುವೆನೆಂದು ಮಾತು ಕೊಟ್ಟು ಅವರನ್ನು ಸಮಾಧಾನಪಡಿಸಿ ಕಳುಹಿಸಿದನು. ಅವನಿಗೆ ಪಾರ್ವತಿಯ ಮೇಲೆ ವಿರಹವಿದ್ದರೂ, ಪಾರ್ವತಿಯ ಮನಸ್ಸನ್ನು ಸ್ವತಃ ಪರೀಕ್ಷಿಸಿ ತಿಳಿಯಬೇಕೆಂದು ತೋರಿತು. ಅದಕ್ಕಾಗಿ ಶಿವನು ಮುದುಕ ಯತಿಯಂತೆ ವೇಷ ಧರಿಸಿ, ದಂಡ ಕಮಂಡಲು ಧರಿಸಿ, ಪಾರ್ವತಿ ತಪಸ್ಸು ಮಾಡುತ್ತಿರುವಲ್ಲಿಗೆ ಹೋದನು. ಪಾರ್ವತಿ ವೃದ್ಧನ ಮುಖದಲ್ಲಿ ಬೆಳಗುವ ತೇಜಸ್ಸನ್ನು ನೋಡಿ, ಬ್ರಹ್ಮ, ವಿಷ್ಣು, ಮಹೇಶ್ವರರಲ್ಲಿ ಒಬ್ಬನಾಗಿರಬೇಕೆಂದು ಅನುಮಾನಪಟ್ಟಳು. ಆತನನ್ನು ಆದರದಿಂದ ಬರಮಾಡಿಕೊಂಡು ಪೂಜಿಸಿ, "ತಾವು



ಯಾರು ಸ್ವಾಮಿ? ನಾನು ತಪಸ್ಸಿನಲ್ಲಿರುವ ಈ ಸ್ಥಳಕ್ಕೆ ಯಾವ ಕಾರಣದಿಂದ ಬಂದಿರಿ? ನನ್ನಿಂದ ನಿಮಗೇನಾದರೂ ಕಾರ್ಯವಾಗಬೇಕಾಗಿದೆಯೇ?" ಎಂದು ಕೇಳಿದಳು.

"ನಾನು ಬ್ರಹ್ಮವಂಶಕ್ಕೆ ಸೇರಿದವನು. ಲೋಕಗಳ ಕ್ಷೇಮವು ಹೇಗಿದೆಯೆಂದು ನೋಡುತ್ತಾ ತಿರುಗುವವನು. ನೀನು ಯಾರ ಮಗಳು? ಯಾವ ಉದ್ದೇಶಕ್ಕಾಗಿ ಇಲ್ಲಿ ಬಂದು ಕುಳಿತು ಹೀಗೆ ಕಠೋರ ತಪಸ್ಸು ಮಾಡುತ್ತಿರುವಿ?" ಎಂದು ಶಿವನು ಅವಳನ್ನು ಕೇಳಿದನು.

ಪಾರ್ವತಿ ಅವನ ಪ್ರಶ್ನೆಗೆ, "ನಾನು ಮೇನಕಾ ಹಿಮವಂತರ ಕುಮಾರಿ. ನನ್ನನ್ನು ಪಾರ್ವತಿ ಎಂದು ಕರೆಯುತ್ತಾರೆ. ಈಶ್ವರನು ಕೈಲಾಸ ಗಿರಿಯ ಭಾಗದಲ್ಲಿ ತಪಸ್ಸು ಮಾಡಿಕೊಂಡಿರುವಾಗ, ನಾನು ಆತನಿಗೆ ಪರಿಚರ್ಯೆ ಮಾಡಿಕೊಂಡಿದ್ದೆನು. ಆಗ ಒಂದು ದಿನ ಮನ್ಮಥನು ತನ್ನ ಹೂ ಬಾಣಗಳಿಂದ ಶಿವನನ್ನು ಕೆಣಕಲು, ಶಿವನು ಮನ್ಮಥನನ್ನು ತನ್ನ ಫಾಲಾಗ್ನಿಯಿಂದ ದಹಿಸಿದನು. ನಾನೂ ಹೆದರಿ ಓಡಿಬಿಟ್ಟೆನು. ಆದರೆ ಶಿವನನ್ನು ಮಾತ್ರ ಮರೆಯಲಿಲ್ಲ. ಆಮೇಲೆ ನಾರದರು ಬಂದು ನನಗೆ ಪಂಚಾಕ್ಷರೀ ಮಂತ್ರವನ್ನು ಉಪದೇಶಿಸಿದರು. ಆ ಮಂತ್ರವನ್ನು ಜಪಿಸುತ್ತಾ ಪರಮಶಿವನನ್ನೇ ಪತಿಯಾಗಿ ಪಡೆಯಬೇಕೆಂಬ ಸಂಕಲ್ಪದಲ್ಲಿ ತಪಸ್ಸು ಮಾಡಿಕೊಂಡಿದ್ದೇನೆ. ಇಷ್ಟು ತಪಸ್ಸು ಮಾಡಿಕೊಂಡಿದ್ದರೂ ಇನ್ನೂ ಶಿವನಿಗೆ ನನ್ನ ಮೇಲೆ ಅನುಗ್ರಹವಾಗಲಿಲ್ಲ. ಆದುದರಿಂದ ಬೇಗದಲ್ಲೇ ಅಗ್ನಿಪ್ರವೇಶಮಾಡಿ ಈ ಜನ್ಮವನ್ನು ಮುಗಿಸಬೇಕೆಂದಿದ್ದೇನೆ" ಎಂದು ಹೇಳಿದಳು.

ಅದನ್ನು ಕೇಳಿ ಶಿವನು, "ನೀನು ಕೇವಲ ತಪ್ಪು ತಿಳುವಳಿಕೆಯುಳ್ಳವಳಾಗಿರುವಿ. ಈಶ್ವರನು ತಪಃ ಸಮಾಧಿಯಲ್ಲೇ ಲಯಿಸಿ ಹೋಗಿರುವ ಮಹಾ ವಿರಾಗಿ. ನೀನು ನಿನ್ನ ತಪಸ್ಸಿನಿಂದ ಲೋಕಕ್ಕೆ ಅಪಾಯ ತರುವುದಕ್ಕಿಂತ, ಮನೆಗೆ ಹಿಂದಿರುಗಿ, ದೇವತೆಗಳಲ್ಲಿ ಒಬ್ಬನನ್ನು ವಿವಾಹಮಾಡಿಕೊಳ್ಳುವುದು ಒಳ್ಳೆಯದು. ಅನಾಗರಿಕ ಶಿವನು ನಿನಗೆ ತಕ್ಕ ಗಂಡನಲ್ಲ. ನಿನ್ನ ಒಳಿತಿಗಾಗಿಯೇ ಹೇಳುತ್ತಿದ್ದೇನೆ. ನನ್ನ ಮಾತು ಕೇಳು" ಎಂದನು.

"ನೀವು ನನಗೇನೂ ಹೇಳಬೇಕಾಗಿಲ್ಲ. ಈ ಬಗೆಯ ಬುದ್ಧಿವಾದವು ನನಗೆ ಬೇಕಾಗಿಲ್ಲ. ವಿಶ್ರಾಂತಿ ಸಾಕೆನಿಸಿದರೆ ಹೊರಟುಹೋಗಬಹುದು. ನಾನು ನನ್ನ ಅಭಿಪ್ರಾಯವನ್ನು ಬದಲಾಯಿಸಿಕೊಳ್ಳುವವಳಲ್ಲ" ಎಂದಳು ಪಾರ್ವತಿ ಬೇಸರದಿಂದ.

"ಹಾಗೆಯೇ ಹೋಗುತ್ತೇನೆ. ಹೋಗುವ ಮೊದಲು ನಿನಗೆ ಇನ್ನೂ ಎರಡು ಹಿತವಚನ ಹೇಳಬೇಕಾಗಿದೆ. ಶಿವನ ಸಂಗತಿ ಪೂರ್ತಿ ನನಗೆ ಗೊತ್ತಿದೆ. ಅವನು ಕೇವಲ ದರಿದ್ರನು. ಪಟ್ಟೆ ಪೀತಾಂಬರ ಧರಿಸುವವನಲ್ಲ. ಚರ್ಮವನ್ನೆ ಸುತ್ತಿಕೊಳ್ಳುತ್ತಾನೆ, ತಿರುಗಾಡಲಿಕ್ಕೆ ಎತ್ತಿನ ಹೊರತು



ಒಳ್ಳೆಯ ವಾಹನವೂ ಅವನಿಗಿಲ್ಲ. ದೆವ್ವ, ಭೂತ ಗಣಗಳನ್ನು ಕರೆದುಕೊಂಡು ತಿರುಗುತ್ತಲಿರುತ್ತಾನೆ. ಶರೀರಕ್ಕೆ ಗಂಧವನ್ನು ಹಚ್ಚಿಕೊಳ್ಳಲಾರನು. ಬೂದಿಯನ್ನು ಬಳಿದುಕೊಳ್ಳುತ್ತಿರುತ್ತಾನೆ. ಅಂಥವನನ್ನು ಮದುವೆಯಾಗಿ ನೀನೇನು ಸುಖವನ್ನು ಅನುಭವಿಸುವಿ ?" ಎಂದು ಹೇಳಿದನು ಶಿವ.

ಪಾರ್ವತಿಗೆ ತುಂಬಾ ಸಿಟ್ಟು ಬಂದಿತು. "ಹೀಗೆಲ್ಲಾ ಹೇಳುವ ನೀನು ನಿಜವಾದ ಯತಿಯೇ ಅಲ್ಲ. ದೊಡ್ಡ ಜ್ಞಾನಿ ಎಂದು ತಪ್ಪುಬಿದ್ದೆನು. ಶಿವನಿಗೆ ಅಷ್ಟೈಶ್ವರ್ಯಗಳೂ ಇವೆ. ಶಿವ ದೂಷಣೆ ಮಾಡಿದವರು ಏಳು ಜನ್ಮಗಳವರೆಗೆ ದಾರಿದ್ರ್ಯವನ್ನೇ ಅನುಭವಿಸುತ್ತಾರೆ" ಎಂದು ತನ್ನ ಪರಿಚಾರಿಕೆಯರನ್ನು ಕರೆದು "ಈ ಕಳ್ಳ ಯತಿಯನ್ನು ಹೊರಗೆ ಕರೆದೊಯ್ದು ಬಿಟ್ಟು ಬಂದುಬಿಡಿರಿ" ಎಂದಳು.

ಶಿವನು ನಕ್ಕು—"ಪಾರ್ವತೀ, ಪ್ರತ್ಯಕ್ಷ ಶಿವನಾದ ನನ್ನನ್ನೇ ಹೊರಗೆ ಹಾಕಿಸುವಿಯಾ ? ನಿನ್ನ ಮನಸ್ಸನ್ನು ತಿಳಿದುಕೊಳ್ಳೋಣವೆಂತಲೇ ಹೀಗೆ ಯತಿ ವೇಷದಲ್ಲಿ ಬಂದೆ. ನಿಜಕ್ಕೂ ನಿನ್ನ ವಿರಹದಿಂದ ನಾನು ತುಂಬಾ ಸಂಕಟಪಡುತ್ತಿದ್ದೇನೆ ; ಹೊರಡು. ನನ್ನೊಂದಿಗೆ ಕೈಲಾಸಕ್ಕೆ ಬಾ" ಎನ್ನುತ್ತಾ ಪಾರ್ವತಿಯ ಕೈ ಹಿಡಿದನು.

ಪಾರ್ವತಿ ಶಿವನ ಕೈಯನ್ನು ಕೊಡರಿ ಬಿಡಿಸಿಕೊಂಡು ನೋಡಿದಾಗ, ಸಾಕ್ಷಾತ್ ಶಿವನೇ ಅವಳ ಇದಿರಿನಲ್ಲಿ ನಿಂತಿದ್ದನು. ಅವಳು ಒಂದು ಹೆಜ್ಜೆ ಹಿಂದೆ ಸರಿದು ಕ್ಷಮಿಸಬೇಕೆಂದು ಕೈ ಮುಗಿದು, "ದೇವಾ, ಹೀಗೆ ನಾನು ಹೊರಟು ಬರುವುದು ಭಾವ್ಯವಾಗಲಾರದೆಂದು ನಿನಗೆ ಗೊತ್ತಿಲ್ಲವೇ ? ಹೀಗೂ ಪರೀಕ್ಷಿಸಬಾರದು. ನನ್ನ ತಾಯಿತಂದೆಯರ ಅನುಮತಿ ಪಡೆದು, ನನ್ನನ್ನು ವಿವಾಹಮಾಡಿಕೊಂಡು ನಿನ್ನೊಂದಿಗೆ ಕರೆದುಕೊಂಡು ಹೋಗಬೇಕು" ಎಂದು ಹೇಳಿದಳು.

ಶಿವನು ಮುಗುಳು ನಗುತ್ತ ತಲೆದೂಗಿದನು. ಪಾರ್ವತಿ ಶಿವನಿಗೆ ನಮಸ್ಕರಿಸಿ, ತಪಸ್ಸಿನ ಫಲ ಸಿಕ್ಕಿದ ತೃಪ್ತಿಯಿಂದ ತನ್ನ ಪರಿಚಾರಿಕೆಯರೊಂದಿಗೆ ಮನೆಯ ಕಡೆಗೆ ಹೋದಳು. ಮೇನಕಾ ಹಿಮವಂತರು ನಡೆದ ಸಂಗತಿಯನ್ನು ತಿಳಿದು ಸಂತೋಷಪಡುತ್ತ, ಪಾರ್ವತಿಯ ವಿವಾಹಕ್ಕೆ ಒಳ್ಳೆಯ ಮುಹೂರ್ತ ನಿಶ್ಚಯಿಸಿದರು. ಅಮೇಲೆ ವಿವಾಹದ ಪ್ರಯತ್ನಗಳನ್ನು ಪ್ರಾರಂಭಿಸಿದರು.

ಶಿವನು ಕೂಡಾ ಕೈಲಾಸಕ್ಕೆ ಹಿಂದಿರುಗಿ ಪ್ರಮಥ ಗಣಗಳೊಂದಿಗೆ, ಮನ್ಮಥನು ತನ್ನನ್ನು ಹೂಬಾಣಗಳಿಂದ ಹೊಡೆದಲ್ಲಿಂದ, ತನ್ನ ಮನಸ್ಸು ಪಾರ್ವತಿಯ ಮೇಲೆ ಸಂಲಗ್ನವಾದಲ್ಲಿಯವರೆಗೆ ಹೇಳಿದನು. ಇನ್ನು ತಾನು ತಪಸ್ಸಿನಲ್ಲಿ ಕುಳಿತಿರಲು ಸಾಧ್ಯವಿಲ್ಲವೆಂದೂ, ಪಾರ್ವತಿಯನ್ನು ವಿವಾಹಮಾಡಿಕೊಳ್ಳಲು ನಿಶ್ಚಯಿಸಿಬಿಟ್ಟೆನೆಂದೂ, ಅದಕ್ಕಾಗಿ ಮಧ್ಯವರ್ತಿತ್ವ ನಡೆಸಲು ಸಪ್ತರ್ಷಿಗಳನ್ನು ಕರೆಯಿಸಬೇಕೆಂದೂ ಹೇಳಿದನು.



ಕೂಡಲೇ ನಂದೀಶ್ವರನು-ಹೊರಟುಹೋಗಿ, ಸಪ್ತ ಮಹರ್ಷಿಗಳನ್ನು ತನ್ನೊಂದಿಗೆ ಕರೆದುಕೊಂಡು ಕೈಲಾಸಕ್ಕೆ ಬಂದನು.

ಅವರೆಲ್ಲರೂ ಈ ನೆವನದಲ್ಲಿ ತಮಗೆ ಶಿವದರ್ಶನ ವಾದುದಕ್ಕೆ ಸಂತೋಷಪಟ್ಟು, "ಪರಮೇಶ್ವರಾ, ನಮ್ಮಿಂದ ಆಗಬೇಕಾದ ಕಾರ್ಯವೇನೆಂಬುದನ್ನು ಅಪ್ಪಣೆ ಮಾಡಿದರೆ ಮಾಡಲು ಸಿದ್ಧರಾಗಿದ್ದೇವೆ" ಎಂದು ಕೇಳಿಕೊಂಡರು.

"ಮಹಾ ಮುನಿಗಳೇ ! ನಾನು ಪಾರ್ವತಿಯನ್ನು ವಿವಾಹಮಾಡಿಕೊಂಡು ಗೃಹಸ್ಥನಾಗಲು ನಿಶ್ಚಯಿಸಿದ್ದೇನೆ. ಆದುದರಿಂದ ನೀವು ಮೇನಕಾ ಹಿಮವಂತರ ಮನೆಗೆ ಹೋಗಿ, ಅವರ ಕುಮಾರಿಯಾದ ಪಾರ್ವತಿಯನ್ನು ನನಗೆ ಕೊಟ್ಟು ಮದುವೆಮಾಡುವ ಹಾಗೆ ಒಳ್ಳೆಯ ಮಾತುಗಳಿಂದ ಒಪ್ಪಿಸಿ, ಮುಹೂರ್ತ ಇಟ್ಟು ನನ್ನ ವಿವಾಹವನ್ನು ನಡೆಸಿಕೊಡಬೇಕು" ಎಂದು ಶಿವನು ಸಪ್ತಮಹರ್ಷಿಗಳೊಂದಿಗೆ ಹೇಳಿದನು.

ಸಪ್ತಮಹರ್ಷಿಗಳು ಅದಕ್ಕೆ ಸಂತೋಷದಿಂದ ಒಪ್ಪಿಕೊಂಡು, ಹಿಮವಂತನಿರುವ ಪರ್ವತಗೃಹಕ್ಕೆ ಹೋದರು. ಮೇನಕಾ ಹಿಮವಂತರು ಅವರಿಗೆ ಆದರಪೂರ್ವಕವಾಗಿ ಅತಿಥಿ ಸತ್ಕಾರಮಾಡಿ, "ಯಾವ ಕೆಲಸದ ಮೇಲೆ ನೀವುಗಳು ನನ್ನ ಗೃಹವನ್ನು ಪಾವನ ಮಾಡಿದಿರೋ ಹೇಳಬೇಕು. ನೀವು ಹೇಳಿದಂತೆ ನಡೆಯುವವನು ನಾನು" ಎಂದನು.

ಅದಕ್ಕೆ ಸಪ್ತಮಹರ್ಷಿಗಳು "ಪುಣ್ಯವಂತರಾದ ಮೇನಕಾ ಹಿಮವಂತರೇ. ನಿಮ್ಮ ಅದೃಷ್ಟವು ಬಹಳ ದೊಡ್ಡದು. ಪರಮೇಶ್ವರೀ ದೇವಿಯೇ ನಿಮ್ಮ ಹೊಟ್ಟೆಯಲ್ಲಿ ಪಾರ್ವತಿಯಾಗಿ ಹುಟ್ಟಿದ್ದಾಳೆ. ಅವಳನ್ನು ಶಿವನು ಮದುವೆಯಾಗಬೇಕೆಂದು ಬಯಸಿ ನಮ್ಮನ್ನು ಕಳುಹಿಸಿದ್ದಾನೆ. ಈ ಮದುವೆಯಿಂದ ನಿಮ್ಮ ಕೀರ್ತಿ ಮೂರು ಲೋಕಗಳಲ್ಲಿಯೂ ವ್ಯಾಪಿಸುತ್ತದೆ" ಎಂದರು.

ಆ ಮಾತು ಕೇಳಿ ಮೇನಕಾ ಹಿಮವಂತರು, "ಅಯ್ಯಾ ಮಹರ್ಷಿಗಳೇ, ನಾವು ಕೂಡಾ ಪಾರ್ವತಿಯನ್ನು ಶಿವನಿಗೆ ಕೊಟ್ಟು ಮದುವೆ ಮಾಡಬೇಕೆಂತಲೇ ಇದ್ದೆವು. ಆದರೆ ನಿನ್ನೆ ಒಬ್ಬ ಭಿಕ್ಷು ಬಂದು ಪಾರ್ವತಿಯನ್ನು ಶಿವನಿಗೆ ಕೊಡಬಾರದೆಂದೂ, ಶಿವನಿಗೆ ಒಂದು ರಾಜ್ಯವಾಗಲಿ, ಸುಖಭೋಗಭಾಗ್ಯಗಳಾಗಲಿ ಇಲ್ಲದಂತಹ ಸ್ಮಶಾನದಲ್ಲಿ ಭೂತಗಣಗಳೊಂದಿಗೆ ಇರುವವನೆಂದೂ, ಹಾವುಗಳನ್ನು ಧರಿಸಿ, ಸರಿಯಾದ ಭೋಜನ ಪಾತ್ರವಿಲ್ಲದೆ ಕಪಾಲಗಳಲ್ಲಿ ತಿನ್ನುವವನೆಂದೂ ಎಚ್ಚರಿಕೆ ಕೊಟ್ಟು ಹೋದನು. ಆದುದರಿಂದ ನಮ್ಮ ಮಗಳು ಸುಖವಾಗಿರಬೇಕಾದರೆ ಶಿವನಿಗೆ ಅವಳನ್ನು ಕೊಟ್ಟು ಮದುವೆ ಮಾಡಬಾರದೆಂದೇ ನಿಶ್ಚಯಿಸಿದ್ದೇವೆ. ಕ್ಷಮಿಸಿರಿ" ಎಂದನು.

ಆ ಮಾತು ಕೇಳಿ ಸಪ್ತಮಹರ್ಷಿಗಳು ಬಹಳ ಆಶ್ಚರ್ಯಪಡುತ್ತ, "ಹೀಗೆ ಹೇಳಿಹೋದ ಆ ಭಿಕ್ಷು

ಯಾವನೋ ದುಷ್ಟನಾಗಿರಬೇಕು. ಶಿವಪಾರ್ವತಿಯರ ಮದುವೆಯನ್ನು ಕೆಡಿಸಲು ನಿಮ್ಮೊಂದಿಗೆ ಹಾಗೆ ಹೇಳಿದ್ದಾನೆ. ನಿಮ್ಮ ಕುಮಾರಿ ಆ ಪರದೇವತೆಯ ಅವತಾರವೆಂಬುದನ್ನು ಮರೆಯಬೇಡಿರಿ. ಇವಳು ಶಿವನನ್ನು ಮದುವೆಯಾಗಲಿಕ್ಕೆಂದೇ ನಿಮ್ಮ ಕುಮಾರಿಯಾಗಿ ಹುಟ್ಟಿದ್ದಾಳೆ" ಎಂದರು.

ಈ ಸಂದರ್ಭದಲ್ಲಿ ವಸಿಷ್ಠ ಮಹಾಮುನಿ ಮೇನಕಾ ಹಿಮವಂತರಿಗೆ ಅನರಣ್ಯನೆಂಬ ರಾಜನ ಕಥೆಯನ್ನು ಹೇಳಿದನು. ಆ ಕಥೆ ಏನೆಂದರೆ,

ಇಂದ್ರಸಾವರ್ಣಿ ಎಂಬ ಹದಿನಾಲ್ಕನೇ ಮನುವಿನ ವಂಶದಲ್ಲಿ ಅನರಣ್ಯನೆಂಬ ರಾಜನು ಚಕ್ರವರ್ತಿಯಾಗಿ ರಾಜ್ಯಪಾಲನೆ ಮಾಡಿಕೊಂಡಿದ್ದನು. ಅವನಿಗೆ ರುಚಿ ಎಂಬ ತಪಃಶಾಲಿಯಾದ ಪುರೋಹಿತನಿದ್ದನು.

ಆ ರಾಜನಿಗೆ ಆರು ಮಂದಿ ಹೆಂಡತಿಯರಿದ್ದರು. ನೂರು ಮಂದಿ ಕುಮಾರರಿದ್ದರು. ಕಟ್ಟಕಡೆಗೆ ನೂರ ಒಂದನೆಯವಳಾಗಿ ಪದ್ಮಾವತಿ ಎಂಬ ಕುಮಾರಿಯೂ ಇದ್ದಳು.

ಪದ್ಮಾವತಿ ಅಸಮಾನ ಸುಂದರಿಯಾಗಿದ್ದಳು. ಅವಳಿಗೆ ಯೌವನವು ಬರುತ್ತಲೇ ಅನರಣ್ಯ ರಾಜನು ತನ್ನ ಕುಮಾರಿಯ ಗುಣರೂಪಗಳಿಗೆ ತಕ್ಕ ವರನಾದ ರಾಜಕುಮಾರನನ್ನು ಅನ್ವೇಷಣೆ ಮಾಡತೊಡಗಿದನು. ಹೀಗಿರುವಾಗ ಒಂದು ದಿನ ಪದ್ಮಾವತಿ ತನ್ನ ಪರಿಚಾರಿಕೆಯರೊಂದಿಗೆ ನದಿಗೆ ಹೋಗಿ ಸ್ನಾನ ಮಾಡಿಕೊಂಡಿದ್ದಳು. ಆಗ ಪಿಪ್ಪಲಾದನೆಂಬ ಮಹಾಮುನಿ ಸ್ನಾನಕ್ಕಾಗಿ ಅಲ್ಲಿಗೇ ಬಂದನು. ಪಿಪ್ಪಲಾದನು ಸಾಮಾನ್ಯ ಮುನಿಯಾಗಿರಲಿಲ್ಲ. ದಧೀಚಿ ಮಹಾಮುನಿಯ ಮಗ.

ಅಂತಹ ಪಿಪ್ಪಲಾದ ಮುನಿ ಪದ್ಮಾವತಿಯ ಅಂದಚೆಂದಗಳನ್ನು ನೋಡಿ ಮೋಹಗೊಂಡನು. ಅವನು ಸೀದಾ ಅನರಣ್ಯನ ಬಳಿಗೆ ಹೋಗಿ, ತನಗೆ ಪದ್ಮಾವತಿಯನ್ನು ಕೊಟ್ಟು ವಿವಾಹ ಮಾಡಬೇಕೆಂದು ರಾಜನನ್ನು ಕೇಳಿದನು.

ರಾಜನ ಬಾಯಿಯಿಂದ ಮಾತೇ ಹೊರಡಲಿಲ್ಲ. ರತೀದೇವಿಯಂತಹ ತನ್ನ ಕುಮಾರಿಯನ್ನು ಮನ್ಮಥನಂತಹ ಯಾವ ರಾಜಕುಮಾರನಿಗೋ ಕೊಡಬೇಕೆಂದು ಕೊಂಡರೆ ಎಲ್ಲಿಂದಲೋ ಈ ಮುದುಕ ಮುನಿ ಕಿತ್ತು ಬಿದ್ದಿದ್ದಾನೆ! "ನನ್ನ ಮಗಳನ್ನು ನಿಮಗೆ ಕೊಡಲಾರೆನು" ಎಂದು ಖಂಡತುಂಡಾಗಿ ಹೇಳಿಬಿಟ್ಟರೆ, ಕೆಟ್ಟ ಶಾಪ ಕೊಟ್ಟು ವಂಶ ನಿರ್ಮೂಲ ಮಾಡಿದರೂ ಮಾಡಿದನೇ!

ಹೀಗೆ ರಾಜನು ಸಂಶಯಾವಸ್ಥೆಯಲ್ಲಿ ಹೊಡೆದುಕೊಳ್ಳುತ್ತಿರಲು, ರಾಜಪುರೋಹಿತರೂ, ಮಂತ್ರಿಗಳೂ ಅನರಣ್ಯ ರಾಜನಿಗೆ ಧೈರ್ಯ ಬರುವಂತೆ ಒಂದು ಆಲೋಚನೆಯನ್ನು ಹೇಳಿದರು.



# ಎಲ್ಲಾ ಬಲ್ಲವನು

ಒಬ್ಬಾನೊಬ್ಬ ರಾಜನ ಹತ್ತಿರ ಮಹಾ ಮೇಧಾವಿ ಎಂದು ಖ್ಯಾತನಾದ ಮಂತ್ರಿ ಇದ್ದನು. ಅವನು ವೃದ್ಧ ನಾದುದರಿಂದ ಪದವಿಯಿಂದ ವಿರಮಿಸಬೇಕೆಂದುಕೊಂಡನು.

ವಿರಮಿಸುವುದಕ್ಕೆ ಮೊದಲು ಅವನ ಸ್ಥಾನಕ್ಕೆ ಹೊಸ ಮಂತ್ರಿಯನ್ನು ಆತನೇ ನಿಯಮಿಸಬೇಕೆಂದು ರಾಜನು ಕೇಳಿಕೊಂಡನು.

ಆದರಂತೆ ಹೊರಟ ಪ್ರಕಟನೆಯನ್ನು ನೋಡಿ ಮಂತ್ರಿಪದವಿಯ ಅಭ್ಯರ್ಥಿಗಳಾಗಿ ಅನೇಕರು ಬಂದರು. ವೃದ್ಧ ಮಂತ್ರಿ ಅವರಿಗೆ ಕೆಲವು ಪರೀಕ್ಷೆಗಳನ್ನಿಟ್ಟನು.

ಅವೆಲ್ಲದರಲ್ಲಿಯೂ ಇಬ್ಬರು ಯುವಕರು ಸರ್ವಶ್ರೇಷ್ಠರೆಂದು ಉತ್ತೀರ್ಣರಾದರು. ಆದರೆ ಮಂತ್ರಿ ಪದವಿಗೆ ಬೇಕಾದವನು ಒಬ್ಬನೇ.

ವೃದ್ಧ ಮಂತ್ರಿ ಅವರಿಬ್ಬರನ್ನೂ ತನ್ನ ಬಳಿಗೆ ಕರೆಯಿಸಿಕೊಂಡನು. ಅಲ್ಲಿ ಕಲಾ ಕುಸುರು ಕೆಲಸಗಳಿಂದ ತಯಾರಿಸಿ ಬಂಗಾರದ ಮುಲಾಮು ತೀಡಿದ ಉನ್ನತಾಸನವೊಂದಿದ್ದಿತು. ಮಂತ್ರಿ ಅವರಿಗೆ ಅದನ್ನು ತೋರಿಸುತ್ತ, "ನೀವಿಬ್ಬರೂ ಎಲ್ಲಾ ಪರೀಕ್ಷೆಗಳಲ್ಲಿಯೂ ಸರಿಸಮವಾಗಿ ಗೆದ್ದಿರುವಿರಿ. ಇದು ಕೊನೆಯ ಪರೀಕ್ಷೆ. ನಿಮ್ಮಿಬ್ಬರಲ್ಲಿ ಎಲ್ಲಾ ಬಲ್ಲೆನೆಂಬ ಗಟ್ಟಿ ನಂಬುಗೆ ಇರುವವನು ಹೋಗಿ ಆ ಆಸನದಲ್ಲಿ ಕುಳಿತುಕೊಳ್ಳಬೇಕು. ಇದಕ್ಕೆ ಮೂರು ಕ್ಷಣ ಮಾತ್ರ ಅವಕಾಶ" ಎಂದನು.

ಎರಡನೇ ಕ್ಷಣದಲ್ಲಿ ಒಬ್ಬನು ಹೋಗಿ ಆಸನದಲ್ಲಿ ಕುಳಿತನು. ವೃದ್ಧ ಮಂತ್ರಿ ಎರಡನೆಯವನನ್ನು ರಾಜನ ಬಳಿಗೆ ಕರೆದುಕೊಂಡು ಹೋಗಿ, ಅವನನ್ನು ಮಂತ್ರಿಯಾಗಿ ನಿಯಮಿಸುವಂತೆ ಸಲಹೆ ಮಾಡಿದನು.

—ಎಸ್. ವಿಶ್ವನಾಥ





# ಕಳ್ಳಫಕೀರ

ಬಹಳ ವರ್ಷಗಳ ಹಿಂದೆ ಇಸ್ಫಹಾನ್ ನಗರದಲ್ಲಿ ಕಮಲುದ್ದೀನ್ ಎಂಬೊಬ್ಬ ಜವುಳೀ ವ್ಯಾಪಾರಿ ಇದ್ದನು. ಬೆಳಿಗ್ಗೆ ಮನೆಯಿಂದ ಹೊರಟು, ರಾತ್ರಿ ಅಂಗಡಿ ಮುಚ್ಚಿದ ಮೇಲೆ ಮನೆಗೆ ಹಿಂದಿರುಗಿ ಹೋಗುವುದು ಅವನ ಪದ್ಧತಿ.

ಅದೇ ರೀತಿಯಲ್ಲಿ ಒಂದು ದಿನ ಅವನು ಕತ್ತಲೆಯಾದ ಮೇಲೆ ಅಂಗಡಿಯ ಬಾಗಿಲನ್ನು ಮುಚ್ಚಿಕೊಂಡು, ತನ್ನ ಮನೆಗೆ ಹೊರಟನು. ಆಗ ಅವನ ಕೈಯಲ್ಲಿ ಆ ದಿನ ಮಾರಾಟವಾದ ಹಣದ ಒಂದು ಚೀಲವಿದ್ದಿತು.

ಕಮಲುದ್ದೀನ್ ಸ್ವಲ್ಪ ದೂರ ರಾಜಬೀದಿಯಲ್ಲಿ ನಡೆದು, ಆಮೇಲೆ ಅಷ್ಟೇನೂ ಜನಸಂಚಾರವಿಲ್ಲದ ಕವಲು ಬೀದಿಯಲ್ಲಿ ತಿರುಗಿ ನಡೆಯ ತೊಡಗಿದನು. ಹಾಗೆ ನಡೆಯುವಾಗ ಥಕ್ಕನೆ ಹಿಂದಿನಿಂದ ಬಂದ ಯುವಕನೊಬ್ಬನು ಮುಂದೆ ಹಾರಿ, ಕಮಲುದ್ದೀನನ ಕೈಯಲ್ಲಿದ್ದ ಹಣದ ಚೀಲವನ್ನು ಎಳೆದುಕೊಂಡು ಓಡ ತೊಡಗಿದನು.

ಗಾಬರಿಯಾದ ಕಮಲುದ್ದೀನ್ "ಕಳ್ಳ, ಕಳ್ಳ!" ಎಂದು ಕೂಗುತ್ತ ಓಡುವಾಗ ಆ ದಾರಿಯಲ್ಲಿ ನಡೆಯುವ ಕೆಲವರು ಚೀಲದೊಂದಿಗೆ ಓಡಿಹೋಗುವ ಕಳ್ಳ ಯುವಕನ ಬೆನ್ನ ಹಿಂದೆ ಬಿದ್ದು ಅವನನ್ನು ಬಿಗಿಯಾಗಿ ಹಿಡಿದರು.

ಕಮಲುದ್ದೀನನಿಗೆ ಹೋದ ಹಣ ಹಾಗೆಯೇ ಹಿಂದಿರುಗಿತು. ಕಳ್ಳನನ್ನು ಹಿಡಿದವರು ಅಷ್ಟಕ್ಕೇ ಬಿಡದೆ ಅವನನ್ನು ನೆಟ್ಟಗೆ ಕೊತ್ವಾಲನ ಬಳಿಗೆ ಎಳೆದುಕೊಂಡು ಹೋಗಿ ಒಪ್ಪಿಸಿದರು. ಆಗ ಕೋತ್ವಾಲನು ಕಚೇರಿಯಲ್ಲಿಯೇ ಇದ್ದನು.

ಆ ಕೋತ್ವಾಲನು ದೊಡ್ಡ ಕೋಪ ಗುಣದವನು. ಕಳ್ಳ ಯುವಕನು ಅವನ ಪಾದಗಳನ್ನು ಹಿಡಿದುಕೊಂಡು ಕ್ಷಮಿಸಬೇಕೆಂದು ದೀನನಾಗಿ ಅಳುತ್ತಾ ಬೇಡುತ್ತಿದ್ದನು.

ಕೋತ್ವಾಲನು ಕೋಪದಿಂದ, "ಏನು ಧೈರ್ಯ ನಿನಗೆ! ನಾನು ಕೋತ್ವಾಲನಾಗಿರುವಾಗ ನಗರದೊಳಗೇ ಕಳ್ಳತನ ಮಾಡುವೆಯಾ?" ಎಂದು ಗಟ್ಟಿಯಾಗಿ ಅವನಿಗೊಂದು ಒದೆಯನ್ನು ಕೊಟ್ಟು ಝಾಡಿಸಿದನು.

ಆ ಒದೆಯಿಂದ ಕಳ್ಳ ಯುವಕನು ಹಾರಿ ಬೀದಿಗೆ ಹೋಗಿ ಬಿದ್ದನು. ಹಾಗೆ ಬಿದ್ದವನು ಮರು ಕ್ಷಣದಲ್ಲೇ

ಬೆಂಡಿನಂತೆ ಎದ್ದೆಗರಿ ಅಲ್ಲಿಂದ ಓಡಲು ತೊಡಗಿದನು. ಅವನನ್ನು ಹಿಡಿಯಲು ಕೆಲವು ಭಟರು ಬೆನ್ನು ಹತ್ತಿದರು, ಆದರೆ ಕಳ್ಳ ಯುವಕನು ಅವರಿಗೆ ಸಿಕ್ಕದೆ ಅಡ್ಡಾದಿಡ್ಡವಾಗಿ ಓಡಿ ನಗರ ಪರಿಸರವನ್ನು ದಾಟಿ ದೂರ ಹೋದನು. ಆದರೂ ಬಿಡದೆ ಭಟರು ಅವನನ್ನು ಬೆಂಬತ್ತಿಕೊಂಡೇ ಇದ್ದರು.

ಓಡಿ ಓಡಿ ದಣಿದುಹೋದ ಕಳ್ಳ ಯುವಕನಿಗೆ ದಾರಿಯ ಬದಿಯಲ್ಲಿದ್ದ ಗುಡ್ಡದ ಗುಹೆಯೊಳಗೆ ಸಣ್ಣ ದೀಪದ ಕಾಂತಿ ಕಂಡುಬಂತು. ಅಲ್ಲಿ ಒಬ್ಬ ಫಕೀರನು ವಾಸಮಾಡಿಕೊಂಡಿರುವನು.

ಕಳ್ಳನು ಗುಹೆಯೊಳಗೆ ಹೊಕ್ಕಾಗ ಫಕೀರನು ಅಲ್ಲಿರಲಿಲ್ಲ. ಕಳ್ಳನು ಅಲ್ಲಿದ್ದ ಒಂದು ದುಪಟಿಯನ್ನು ಹೊದ್ದುಕೊಂಡು ಪ್ರಾರ್ಥನೆ ಮಾಡುವವನ ಹಾಗೆ ಸುಮ್ಮನೆ ಕುಳಿತುಕೊಂಡನು.

ಕೆಲವು ಕ್ಷಣಗಳಲ್ಲಿ ಭಟರು ಆ ಕಡೆಗೇ ಒಂದು ಗುಹೆಯೊಳಗೆ ಬಗ್ಗಿ ನೋಡುತ್ತ, "ಅಯ್ಯಾ, ಈ ಕಡೆಗೆ ಯಾರಾದರೂ ಓಡಿ ಬಂದುದನ್ನು ನೋಡಿದಿರಾ ?" ಎಂದು ಕೇಳಿದರು.

"ಇಲ್ಲ!" ಎಂದು ಕಳ್ಳನು ಗಂಭೀರವಾಗಿ ತಲೆ ಯಾಡಿಸಿದನು. "ಅಯ್ಯಾ! ಕ್ಷಮಿಸಬೇಕು. ತಮ್ಮ ಪ್ರಾರ್ಥನೆಗೆ ನಮ್ಮಿಂದ ತೊಂದರೆಯಾಯಿತು" ಎಂದು ಕಳ್ಳನಿಗೆ ನಮಸ್ಕಾರಮಾಡಿ ಭಟರು ಹೊರಟು ಹೋದರು.

ಈಗ ಕಳ್ಳನಿಗೆ ಭಯ ಹೋಗಿ, ಮನಸ್ಸಿಗೆ ನೆಮ್ಮದಿ ಬಂದಿತು. ಭಟರು ತನಗೆ ನಮಸ್ಕಾರ ಮಾಡಿದುದನ್ನು ನೋಡಿ ಅವನಿಗೆ ನಗೆಯೂ ಬಂದಿತು. ಮರುಕ್ಷಣದಲ್ಲಿಯೇ ಅವನಿಗೆ ಒಂದು ಸಂದೇಹವೂ ಬಂದಿತು. ಫಕೀರನಾಗಿ ಸ್ವಲ್ಪ ನಟಿಸಿದ ಕೂಡಲೇ ತನಗೆ ಅಪಾಯವು ತಪ್ಪಿಹೋಯಿತು. ಅದರ ಮೇಲೆ ಇತರರು ತನ್ನ ಮೇಲೆ ಗೌರವ ಬೇರೆ ತೋರಿಸುತ್ತಾರೆ. ತಾನು ನಿಜವಾಗಿಯೇ ಫಕೀರನಾಗಿಬಿಟ್ಟರೆ ಜನರು ಇನ್ನೆಷ್ಟು ಭಕ್ತಿ ಗೌರವ ತೋರಿಸಿ ಪೂಜಿಸುತ್ತಾರೋ ?



ಕಳ್ಳನು ಹೀಗೆ ಆಲೋಚನೆಯಲ್ಲಿರುವಾಗ, ಆ ಗುಹೆಯಲ್ಲಿ ವಾಸಮಾಡುವ ಫಕೀರನು ಅಲ್ಲಿಗೆ ಬಂದನು. ಕಳ್ಳನು ಅವನ ಪಾದಗಳ ಮೇಲೆ ಬಿದ್ದು, "ಮಹಾತ್ಮರೇ, ನಾನೊಬ್ಬ ದಿಕ್ಕಿಲ್ಲದ ಅನಾಥನು. ನಾನು ಈ ಗುಹೆಯಲ್ಲಿಯೇ ಇದ್ದು ನಿಮಗೆ ಸೇವೆ ಮಾಡಿಕೊಂಡಿರಲು ಅನುಮತಿ ಕೊಡಬೇಕು" ಎಂದು ಬೇಡಿಕೊಂಡನು.

ದಯಾಳುವಾದ ಫಕೀರನು ಅವನ ಬೇಡಿಕೆಯನ್ನು ಅಂಗೀಕರಿಸಿಕೊಂಡನು. ಕಳ್ಳನನ್ನು ಅಲ್ಲಿಯೇ ತನ್ನ ಶಿಷ್ಯನಾಗಿರಲು ಹೇಳಿದನು. ಆಗ ನೆಮ್ಮದಿ ಯಾಯಿತು ಕಳ್ಳನಿಗೆ.

ಆ ದಿನದಿಂದ ಕಳ್ಳನು ಮುದಿ ಫಕೀರನಿಗೆ ಶುಶ್ರೂಷೆ ಮಾಡುತ್ತ, ಅವನು ಮಾಡುವ ಧರ್ಮ ಬೋಧನೆಗಳನ್ನು ಕೇಳುತ್ತ ದಿನ ಕಳೆಯುತ್ತಿದ್ದನು.

ಕ್ರಮವಾಗಿ ಅವನ ಹೃದಯವು ಪರಿವರ್ತನೆಯಾಗ ತೊಡಗಿತು, ಭಾವನೆಗಳೆಲ್ಲ ಮೃದುವಾಗ ತೊಡಗಿದುವು. ಸಜ್ಜನನಾಗಿ, ಧಾರ್ಮಿಕನಾಗಿ ಬದಲಾವಣೆ ಹೊಂದಿದನು.

ಕೆಲವು ವರ್ಷಗಳು ಕಳೆದುವು. ಮುದಿ ಫಕೀರನು ಕಾಲಧರ್ಮ ಹೊಂದಿದನು. ಕಳ್ಳನು ಅದೇ ಗುಹೆಯಲ್ಲಿ ಫಕೀರನಾಗಿರುತ್ತ, ದೊಡ್ಡ ಧರ್ಮ ಬೋಧಕನಾಗಿ ಕೀರ್ತಿ ಪಡೆಯುತ್ತಿದ್ದನು.

ಒಂದು ದಿನ ಈ ಕಳ್ಳ ಫಕೀರನು ಒಬ್ಬ ಶಿಷ್ಯನ ಕೋರಿಕೆಯನ್ನು ಮನ್ನಿಸಿ ನಗರದೊಳಗೆ ಹೋದನು. ಅಲ್ಲಿ ಅನೇಕ ಮಂದಿ ಪ್ರಜೆಗಳು ಅವನಿಗೆ ಗೌರವದ ಸ್ವಾಗತವಿತ್ತು, ತಮಗೆ ಇದಿರಾದ ಕೆಲವು ಧರ್ಮ ಸಂದೇಹಗಳನ್ನು ವಿವರಿಸಿದರು. ಕಳ್ಳ ಫಕೀರನು ಅವರವರ ಸಂಶಯಗಳಿಗೆ ಉಚಿತ ರೀತಿಯಲ್ಲಿ ಉತ್ತರ ಕೊಟ್ಟು ತೃಪ್ತಿಪಡಿಸಿದನು.

ಆ ಸಮಯದಲ್ಲಿ ಒಬ್ಬ ಮುದುಕನು ಕಳ್ಳ ಫಕೀರನ ಹತ್ತಿರ ಬಂದು, ಭಕ್ತಿಯಿಂದ ಅವನ ಕಾಲುಗಳನ್ನು ಮುಟ್ಟಿ, "ಸಾಧು ಪುಂಗವರೇ, ನನ್ನಂಥವನು ದೈವ ಸಾನ್ನಿಧ್ಯವನ್ನು ಸೇರುವುದೆಂದರೆ ಏನಾದರೂ ಮಹಾ ಅದ್ಭುತವೇ ನಡೆಯಬೇಕಾದೀತು. ಏಕೆಂದರೆ ನಾನು ನಿಮ್ಮಂತೆ ಬದುಕಿದವನಲ್ಲ. ನಿಮಗೆ ವಿರುದ್ಧ ರೀತಿಯಲ್ಲಿ ಬದುಕಿದವನು. ಎಷ್ಟೋ ಕಾಲದವರೆಗೆ ಈ ನಗರದ ಕೋತ್ವಾಲನಾಗಿದ್ದವನು. ಕಳ್ಳಸುಳ್ಳರನ್ನು ನಿರ್ದಯದಿಂದ ಹೊಡೆದವನು" ಎಂದನು.

"ಅಪ್ಪಾ, ಅದ್ಭುತಗಳು ನಡೆಯಲಾರವೆಂದು ಏಕೆ ಸಂದೇಹಪಡುವೆ ? ಒಂದಾನೊಂದು ದಿನ ನಾನು ನಿನ್ನ ಪಾದಗಳನ್ನು ಹಿಡಿದು ಬೇಡಿಕೊಂಡವನು. ಆದರೆ ಆ ಸಮಯದಲ್ಲಿ ನೀನು ನನ್ನನ್ನು ಕೋಪದಿಂದ ಜೋರಾಗಿ ಒದ್ದು ಝಾಡಿಸಿದಿ. ಆದರೂ ಅದೇ ನೀನು ಈ ದಿನ ಎಷ್ಟೋ ಭಕ್ತಿಯಿಂದ ನನ್ನ ಪಾದಗಳನ್ನು ಮುಟ್ಟಿರುವಿ. ಇದು ಅದ್ಭುತವಲ್ಲದೆ ಮತ್ತೇನು ? ಒಂದು ಕಾಲದ ಕಳ್ಳನು ದೇವರ ದಯಕ್ಕೆ ಪಾತ್ರನಾಗುವಾಗ, ಕಳ್ಳನನ್ನು ಹಿಡಿದು ಬಂಧಿಸುವ ಕೋತ್ವಾಲನು ಕೂಡಾ ದೇವರ ಕರುಣೆಗೆ ಏಕೆ ಪಾತ್ರನಾಗಲಾರನು ?" ಎಂದು ಹೇಳಿ ಮೀಸೆಗಳೆಡೆಯಲ್ಲಿ ಸಣ್ಣಗೆ ನಕ್ಕನು ಕಳ್ಳ ಫಕೀರ.

ಆ ಮಾತು ಮುದುಕನಿಗೆ ಅರ್ಥವಾದಂತೆ ಕಾಣಲಿಲ್ಲ. ಆಗ ಕಳ್ಳ ಫಕೀರನು ಅವನಿಗೆ ಅನೇಕ ವರ್ಷಗಳ ಹಿಂದೆ ನಡೆದ ಸಂಘಟನೆಯನ್ನು ವಿವರಿಸಿ ಹೇಳಿದನು.

ಆಗ ಮುದಿ ಕೋತ್ವಾಲನು ಹಿಡಿಸಲಾಗದಷ್ಟು ಆನಂದದಿಂದ ಕಳ್ಳ ಫಕೀರನ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡನು. ಅವನ ಕಣ್ಣೀರಿನಿಂದ ಕಳ್ಳ ಫಕೀರನ ಪಾದಗಳು ಒದ್ದೆಯಾದವು.



ಪಕ್ಷಿಗಳು–ಪ್ರಾಣಿಗಳು

# ನಾಲ್ಕು ಕಾಲುಗಳ 'ಮೀನುಗಳು'

೧೭೪೧ನೇ ಸಂವತ್ಸರದಲ್ಲಿ ರಷ್ಯಕ್ಕೆ ಸೇರಿದ ಸೆಯಿಂಟ್ ಪೀಟರ್ ಎಂಬ ಹಡಗು ಬೇರಿಂಗ್ ದ್ವೀಪದ ತೀರದಲ್ಲಿ ಒಡೆದು ಹೋಯಿತು. ಆ ಹಡಗಿನಿಂದ ಜೀವದೊಂದಿಗೆ ಹೊರಬಿದ್ದ ಕೆಲವರು ಈಜುತ್ತಾ ಬೇರಿಂಗ್ ದ್ವೀಪವನ್ನು ತಲುಪಿದರು. ಹಾಗೆ ಅವರು ಈಜುತ್ತಿರುವಾಗ 'ಸೀ ಆಟರ್ಸ್' ಎಂಬ ಸಸ್ತನ ಜಲಜಂತುಗಳನೇಕವಾಗಿರುವುದನ್ನು ನೋಡಿದರು. ರಷ್ಯಾ ಪ್ರಯಾಣಿಕರು ಆ ದ್ವೀಪದಲ್ಲಿದ್ದಷ್ಟು ದಿನಗಳೂ ತಮ್ಮ ಆಹಾರಕ್ಕಾಗಿಯೂ, ಗುಡಾರಗಳ ಚರ್ಮಕ್ಕಾಗಿಯೂ ಅಲ್ಲಿಯ ಆಟರ್ಸ್‌ನ್ನು ಕೊಲ್ಲ ತೊಡಗಿದರು. ಅಲ್ಲಿಂದ ಅವುಗಳ ಚರ್ಮಗಳನ್ನು ತೆಗೆದುಕೊಂಡು ಹೋಗಿ ಒಳ್ಳೆಯ ಬೆಲೆಗೆ ಮಾರಿಕೊಂಡರು. ಅಂದಿನಿಂದ ಸಮುದ್ರದ ಮೇಲೆ ಈ ಪ್ರಾಣಿಗಳು ಕ್ರಮವಾಗಿ ನಾಶವಾಗತೊಡಗಿದುವು. ೧೯೧೦ ನೇ ವರ್ಷ ಅಮೇರಿಕಾವೂ, ೧೯೧೫ ನೇ ವರ್ಷದಲ್ಲಿ ಮತ್ತೆ ಕೆಲವು ದೇಶಗಳೂ ಈ ಜಲಜಂತು ಸಂತತಿಯನ್ನು ರಕ್ಷಿಸಲು ಇವುಗಳ ಬೇಟೆಯನ್ನು ನಿಷೇಧಿಸುವ ಶಾಸನ ಮಾಡಿದುವು.

ಸಮುದ್ರದಲ್ಲಿ ಪಾಚಿ ದಟ್ಟವಾಗಿದ್ದು, ಆಳವಿಲ್ಲದ ಪ್ರಾಂತಗಳಲ್ಲಿ ಈ ಜಲ ಜಂತುಗಳು ಗುಂಪುಗುಂಪಾಗಿ ವಾಸಿಸುತ್ತವೆ. ಬಾಲವು ಮುಕ್ಕಾಲು ಮೀಟರಿನಿಂದ ಒಂದು ಮೀಟರ್‌ವರೆಗೆ ಉದ್ದವಿರುತ್ತದೆ ಈ ಪ್ರಾಣಿಗೆ. ದೊಡ್ಡ ತಲೆ, ಗಿಡ್ಡ ಕುತ್ತಿಗೆ, ಚಿಕ್ಕ ಚಿಕ್ಕ ಕಣ್ಣು ಕಿವಿಗಳು, ಗುಂಪು ಮೀಸೆ ಹೀಗಿರುವ ಈ ಜಂತುಗಳ ಮುಂಗಾಲುಗಳು ಹಿಂಗಾಲುಗಳಿಗಿಂತ ಗಿಡ್ಡವು, ಬೆರಳುಗಳನ್ನು ಕೂಡಿಸುವ ಚರ್ಮವೂ ಇದೆ.

ಅವು ನೀರ ಮೇಲೆ ಅಂಗಾತ ಮಲಗಿ ಹೊಡೆದುಕೊಂಡು ಹೋಗದಂತೆ ದೇಹಕ್ಕೆ ಸಮುದ್ರದ ಪಾಚಿಯನ್ನು ಸುತ್ತಿಕೊಂಡು ಗುಂಪುಗುಂಪಾಗಿ ನಿದ್ರಿಸುತ್ತವೆ. ಆ ಸಮಯದಲ್ಲಿ ಒಂದು ಮಾತ್ರ ಕಾವಲು ಕಾಯುತ್ತದೆ. ನಿದ್ದೆಯಿಂದ ಎದ್ದ ಕೂಡಲೇ ಸಮುದ್ರದಲ್ಲಿ ಮುಳುಗಿ ಏಡಿಗಳನ್ನೂ ಚಿಪ್ಪುಗಳನ್ನೂ ಹಿಡಿದು ತಿನ್ನುತ್ತವೆ. ಇವು ಚಿಪ್ಪನ್ನು ಒಡೆಯಲು ಸಮುದ್ರ ತಳದಿಂದ ಕಲ್ಲುಗಳನ್ನು ತಂದುಕೊಂಡು ಕೆಳಗಿನ ಕಾಲುಗಳಿಂದ ಕಲ್ಲುಗಳನ್ನು ಹಿಡಿದು, ಕೈಗಳಿಂದ ಚಿಪ್ಪುಗಳನ್ನು ಅದಕ್ಕೆ ಒಡೆದು ತಿನ್ನುತ್ತವೆ. ಎರಡು ವರ್ಷಗಳಿಗೆ ಒಂದುಸಾರಿ ಮಾತ್ರವೇ ಈನುವಂತಹ ಈ ಜಲ ಜಂತುಗಳು ಈನುವ ಕಾಲಕ್ಕೆ ಮಾತ್ರವೇ ನೆಲದ ಮೇಲೆ ಬರುತ್ತವೆ.

ಶಾಂತಿಯುತ ಸಹಜೀವನಕ್ಕೆ ಅಭ್ಯಾಸವಾದ ಈ ಜಲಜಂತುಗಳು ಕೆಲವು ವಿಷಯಗಳಲ್ಲಿ ಮನುಷ್ಯರ ಹಾಗೆಯೇ ಪ್ರವರ್ತಿಸುತ್ತವೆ.



## ಫೋಟೋ ಶೀರ್ಷಿಕೆಯ ಸ್ಪರ್ಧೆ : : ಬಹುಮಾನ ರೂ. ೫೦

ಗೆದ್ದ ಶೀರ್ಷಿಕೆಗಳು ೧೯೮೫ ಆಗಸ್ಟ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.



Varadaraya Nayak



Srivatsa S. Vati

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ಜೂನ್ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦ ೦೨೬

---

### ಏಪ್ರಿಲ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ಅಂಗೈಮೇಲೆ ಅಂಬಾರಿ ಆನೇಂತ ಜಂಬಾನೇ?

ಎರಡನೇ ಫೋಟೋ : ಈ ಮಂಗೂನ ನನ್ ತೋಳ್ಮೇಲೇ ಏರಿಸ್ಕೋತೇನೆ!

ಕಳುಹಿಸಿದವರು : ಪಿ. ಎನ್. ರಾಜಶ್ರೀ, ವಲಸಲವಾಕಂ, ಮದರಾಸು-೮೭

ಬಹುಮಾನ ರೂ. ೫೦/– ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.

# ನಟರಾಜ್‌ನಿಂದ ಬರವಣಿಗೆ, ಎಂದರೆ ಜಯಮಾಲೆ ಕೊರಳಿಗೆ



ನಟರಾಜ್‌ನಿಂದ ಬರೆಯುವುದೆಂದರೆ ಮಕ್ಕಳಿಗೆ ಬಲು ಇಷ್ಟ. ಇದರಲ್ಲಿ ಆಶ್ಚರ್ಯವೇನೂ ಇಲ್ಲ. ನಟರಾಜ್ ಅಷ್ಟು ಚೆನ್ನಾಗಿ ಬರೆಯುತ್ತದೆ. ಅಧಿಕ ನುಣುಪಾಗಿ, ಕಪ್ಪಾಗಿ, ಮೊನಚಾಗಿ ಮತ್ತು ಸ್ಪಷ್ಟವಾಗಿ! ಅಷ್ಟೇ ಅಲ್ಲ, ಇದರ ಮೊನೆಯೂ ತುಂಡಾಗುವುದಿಲ್ಲ. ಬರವಣಿಗೆಯಲ್ಲಿ ನಟರಾಜ್ ಪ್ರತಿಯೊಂದು ಪೆನ್ಸಿಲ್‌ಗಿಂತಲೂ ಮುಂದೆ !

ವಿವಿಧ
ವರ್ಣರಂಜಿತ
ಡಿಸೈನ್‌ಗಳಲ್ಲಿ
ದೊರೆಯುತ್ತವೆ.



ಬೋಂಡೆಡ್ ಲೆಡ್



**ನಟರಾಜ್** ಪೆನ್ಸಿಲ್

ಬರೆಯಲು ಇಲ್ಲ ಬಳಲಿಕೆ, ಆದರೂ ಹೆಚ್ಚು ಬಾಳಿಕೆ.

ಹಿಂದುಸ್ಥಾನ್ ಪೆನ್ಸಿಲ್ಸ್ ಪ್ರೈವೇಟ್ ಲಿಮಿಟೆಡ್
ಬೊಂಬಾಯಿ 400 001 ಅವರ ಉತ್ಕೃಷ್ಟ ತಯಾರಿಕೆ.

everest/85/HP/190-kn